# ಸಿದ್ಧಗಂಗಾ

## ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ



ಮೇ, 1982

"ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಂತಹ ಜ್ಞಾನಿ, ನಿಗರ್ವಿ, ತ್ರಿವಿಧ ದಾಸೋಹಿ ಸ್ವಾಮಿಗಳು ಇಡೀ ವಿಶ್ವದಲ್ಲಿಯೇ ಅಪರೂಪ, ಇಂಥವರನ್ನು ಹೊಂದಿದ ಕನ್ನಡನಾಡು ಭಾರತದೇಶ ಧನ್ಯವೆಂದು ಹೇಳುತ್ತೇವೆ".

—ಶ್ರೀ ಹಾವಗೀ ಸ್ವಾಮಿ ಮಹಾರಾಜ ಮಠ
ಮಹಾರಾಷ್ಟ್ರ 22-4-82

"ಶಿವನ ಅವತಾರಿಗಳಲ್ಲೊಬ್ಬರಾಗಿ ಮೆರೆದು, ಧರ್ಮ ಪರಂಪರೆಯನ್ನು ಕಾಪಾಡಿಕೊಂಡುಬಂದು, ಸದ್‌ಭಕ್ತರಿಗೆ ಸನ್‌ಮಾರ್ಗಿಗಳಾಗಿ, ಭಕ್ತ ಜನಗಳ ಆಸೆ ಆಕಾಂಕ್ಷೆಗಳನ್ನು ಈಡೇರಿಸುತ್ತಾ, ತಮ್ಮ ತಪಸ್ಸನ್ನು ಭಕ್ತಜನಗಳಿಗೆ ಹಂಚಿ, ಪವಾಡ ಪುರುಷರಾಗಿ ಶ್ರೀ ಸಿದ್ಧಲಿಂಗ ಮಹಾ ಸ್ವಾಮಿಗಳವರ ಸುಕ್ಷೇತ್ರದಲ್ಲಿ ದಾಸೋಹಮೂರ್ತಿಗಳಾದ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ಅನಂತ ನಮಸ್ಕಾರಗಳು."

—ಶ್ರೀ ಷ|| ಬ್ರ|| ಚಂದ್ರಮೌಳೇಶ್ವರ ಶಿವಾಚಾರ್ಯ
ಮಹಾ ಸ್ವಾಮಿಗಳು, ಎಂ.ಎ.
ತೆಗ್ಗಿನಮಠ, ಬಳ್ಳಾರಿ ಜಿಲ್ಲಾ 19-4-82

"ಶ್ರೀ ಸಿದ್ಧಗಂಗಾ ಕ್ಷೇತ್ರವು ಪೂಜ್ಯ ಮಹಾ ಸ್ವಾಮಿಗಳವರ ತ್ಯಾಗ, ತಪಸ್ಸು, ವೈರಾಗ್ಯಗಳಿಂದ ತನ್ನದೇ ಆದ ವಿಶಿಷ್ಟಸ್ಥಾನ ಪಡೆದಿದೆ. "ಘಟದಿಂದ ಮಠ" ಎಂಬುವ ನಾಣ್ನುಡಿಯಂತೆ ಪೂಜ್ಯ ಮಹಾ ಸ್ವಾಮಿಗಳವರ ಘನ ವ್ಯಕ್ತಿತ್ವ, ಅನ್ಯಾದೃಶ ಕರ್ತೃತ್ವಶಕ್ತಿ, ಅನುಪಮ ಅಂತಃಕರಣದಿಂದ ಮಾನವ ಕುಲಕ್ಕೇನೇ ಭೂಷಣ ತಂದಿದ್ದಾರೆ. ಪೂಜ್ಯರು ಸ್ವಾಮಿ ವರ್ಗಕ್ಕೇನೇ ಮಾರ್ಗದರ್ಶಕರಾಗಿದ್ದಾರೆ, ಅವರು ಬಹುದೊಡ್ಡ ಇತಿಹಾಸವನ್ನೇ ನಿರ್ಮಿಸಿ, ಜೀವಿಸಿರುವಾಗಲೇ ನಿತ್ಯರಾಗಿದ್ದಾರೆ, ಚಿರಾಯುಗಳಾಗಿದ್ದಾರೆ."

—ಶ್ರೀ ನಿಜಲಿಂಗೇಶ್ವರ ಮಹಾ ಸ್ವಾಮಿಗಳವರು
ಸಿದ್ಧಸಂಸ್ಥಾನ ಮಠ, ನಿಡಸೋಸಿ 20-4-82

"ಶ್ರೀ ಶ್ರೀಗಳವರ ಪ್ರಭಾವವನ್ನು ನೋಡಿ ವಿಸ್ಮಿತನಾದೆ, ಸಮಾಜದ ಭಾಗ್ಯನಿಧಿ ಎಂದು ನನ್ನ ನಂಬಿಕೆ. ಒಟ್ಟನಲ್ಲಿ ಮಹೋತ್ಸವ ಮಹೋನ್ನತವಾಗಿ ನೆರವೇರಿದೆ. ಈಶ್ವರಾನುಗ್ರಹವಲ್ಲದೆ ಮತ್ತೇನು."

—ಜೆ. ಬಿ. ಮಲ್ಲಾರಾಧ್ಯ
ಅಧ್ಯಕ್ಷರು ವೀರಶೈವ ಮಹಾಸಭೆ, ಬೆಂಗಳೂರು 30-4-82

# ಸಿದ್ಧಗಂಗಾ

ಸಂಪುಟ—೧೮ ಸಂಚಿಕೆ ೫-೬ ಮೇ, ಜೂನ್, ೧೯೮೨

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

★ ★ ★

ಬಸವಣ್ಣಾ, ನೀವು ಮರ್ತ್ಯಕ್ಕೆ ಬಂದು ನಿಂದರೆ,
ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸಿತಯ್ಯಾ.

ಎನ್ನ ಕಾಯದ ಕಳವಳವ ನಿಲಿಸಿ, ಗುರು ಲಿಂಗವ ತೋರಿದ.
ಎನ್ನ ಮನದ ವ್ಯಾಕುಳವ ನಿಲಿಸಿ, ಜಂಗಮವ ತೋರಿದ.
ಇಂತು ಅಂತರಂಗ ಬಹಿರಂಗದಲ್ಲಿ ತಾನೆಯಾಗಿ.
ಎನ್ನ ಪಾವನವ ಮಾಡಿದನು.
ಅಮರ ಗಣಂಗಳು ಮುನಿದು, ಎನ್ನ ಕೈಲಾಸಕ್ಕೊಯ್ದರೆ
ಸದ್ಯೋನ್ಮುಕ್ತಿಯ ತೋರಲೆಂದು,
ಮರ್ತ್ಯಕ್ಕೆ ಮರಳಿ ತಂದ ಬಸವಣ್ಣನೇ ಗುರುವೆನಗೆ.
ಸಂಗನ ಬಸವಣ್ಣನೆ ಪರವೆನಗೆ.
ಸಂಗನ ಬಸವಣ್ಣನ ಕರುಣದಿಂದ ಘನಕ್ಕೆ ಘನಮಹಿಮ
ಅಲ್ಲಮ ಪ್ರಭುವಿನ ಶ್ರೀ ಪಾದವ ಕಂಡು
ಬದುಕಿದೆನು ಕಾಣಾ ಗೌರೇಶ್ವರಾ.

....ಮೋದಾರ ಕೇತಯ್ಯ

# ಈ ಸಂಚಿಕೆಯಲ್ಲಿ



### ಚಂದಾದಾರರಲ್ಲಿ ವಿನಂತಿ

1982 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿ ಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

ನಮ್ಮೀ ಪವಿತ್ರವಾದ ಭರತಖಂಡ ಜಗತ್ತಿಗೇ ದರ್ಶನದ ಬೆಳಕನ್ನು ಕೊಟ್ಟಂತಹ ರಾಷ್ಟ್ರ. ಇದು ಅಭಿಮಾನದ ಮಾತಲ್ಲ; ವಿದೇಶೀಯವಿದ್ವಾಂಸರ ಅಭಿಪ್ರಾಯ. " ನಮ್ಮ ಆಂಗ್ಲ ಜನಾಂಗ ಜೀವನದ ಕಲೆಯನ್ನರಿಯದೆ ಅಜ್ಞರಾಗಿ ಜೀವಿಕೆ ಮಾಡುತ್ತಿದ್ದ ವೇಳೆಯಲ್ಲಿ ಭಾರತೀಯರು ಒಳ್ಳೆಯ ನಾಗರಿಕ ಜೀವನವನ್ನು ಸಾಗಿಸುತ್ತಿದ್ದರು. " ಇಷ್ಟೆ ಅಲ್ಲ, ಜಗತ್ತಿನಲ್ಲಿ ಧರ್ಮದ ಅಧಿಕಾರವನ್ನು ಪಡೆದಿರುವ ರಾಷ್ಟ್ರ ಭರತಖಂಡವೊಂದೆ. ಜಗತ್ತಿನ ಎಲ್ಲ ಪ್ರಾಜ್ಞರೂ ಜಗತ್ತಿನ ಶಾಂತಿ ಸ್ಥಾಪನೆಗಾಗಿ ಭರತಖಂಡದತ್ತ ನೋಡುತ್ತಿದ್ದಾರೆ. ಜಗತ್ತಿನ ಈ ನಿರೀಕ್ಷಣೆಯನ್ನು ದಿಟಗೊಳಿಸಬೇಕಾದರೆ, ಪ್ರತಿಯೊಬ್ಬ ಭಾರತೀಯನಲ್ಲಿಯೂ ನಮ್ಮ ಪೂರ್ವಿಕರು ಗಳಿಸಿಟ್ಟು ಹೋಗಿರುವ ಆತ್ಮ ಸಂಪತ್ತಿನ ಪುನರ್ ಸಂಪಾದನೆಯಾಗಬೇಕು. ಈ ದೇಹ ನಶ್ವರ; ಆತ್ಮವೊಂದೆ ಶಾಶ್ವತ; ಅಂತಹ ಆತ್ಮ ಸ್ವರೂಪವನ್ನು ತಿಳಿದುಕೊಳ್ಳಬೇಕು; ಕರ್ಮಶೀಲನಾಗಿ ಈ ಜಗತ್ತಿನಲ್ಲಿ ಹೊರ ಬಂದ ಮಾನವ ಸತ್ಕಾನುಕರ್ಮದಿಂದ ತನ್ನ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕು; ಪರಮಾತ್ಮ ಕರುಣಿಸಿವರು ಎಲ್ಲ ವಿಧವಾದ ಶಕ್ತಿಗಳನ್ನು ಅವನ ಸಮೀಪವರ್ತಿಯಾಗುವುದರಲ್ಲಿ ವ್ಯಯಗೊಳಿಸಬೇಕು; -ಎಂಬ ಮೊದಲಾದ ಸಂಕಲನವೇ ಆತ್ಮಸಂಪತ್ತು. ಈ ಆತ್ಮ ಸಂಪತ್ತನ್ನು ಬೆಳಸಿಕೊಂಡಾಗಲೇ ಜೀವನಕಲೆ ಪರಿಪೂರ್ಣವಾಗುವುದು.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ [illegible]

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕ ಮಂಡಲಿ

ಡಾ। ಚನ್ನಪ್ಪ [illegible]

ಪಿ. ಎಸ್ ಚಂದ್ರಶೇಖರಯ್ಯ

ಬಸವರಾಜು

ಎಂ. ರೇಣುಕಾರಾಧ್ಯ [illegible]

ಮುದ್ರಕರು [illegible]

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ

ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 151-00 ರೂ

ಪ್ರಕಾಶಕರು

ಸಿದ್ಧಗಂಗಾ ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ಸಗಿಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು [illegible] ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. [illegible] ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಅಗತ್ಯವಿದ್ದಾಗ್ಗೆ [illegible] ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. [illegible] ಬಯಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

ಸಂಪಾದಕರು

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ

[illegible] ಪ್ರಾರ್ಥನೆ.





# ಸಂಪಾದಕೀಯ

ಶ್ರೀ ಸಿದ್ಧಗಂಗಾ ಗುರುಕುಲ ಅತ್ಯಂತ ಪ್ರಾಚೀನ ಪುಣ್ಯಾಶ್ರಮ. ಶೂನ್ಯ ಸಿಂಹಾಸನ ಪರಂಪರೆಯ ಅನೇಕ ಸಂತರು ತಪಗೈದ ತಪೋಭೂಮಿ. ನೂರಾರು ವರ್ಷಗಳ ತಪಸ್ಸಿದ್ಧಿಯಿಂದ ಉದ್ಭವಿಸಿದ ಗಂಗೆ, ಸಿದ್ಧಗಂಗೆಯಾಗಿ ನಾಡಿನ ಭಕ್ತರ ಹೃನ್ಮನಗಳನ್ನು ಪುನೀತಗೊಳಿಸಿತು. ತ್ರಿವಿಧ ದಾಸೋಹ ಕ್ಷೇತ್ರವೆಂದು ನಾಡಿನಲ್ಲೆಲ್ಲಾ ಪ್ರಖ್ಯಾತಿಗಳಿಸಿ ಮಹಾ ಸಂಸ್ಥೆಯಾಯಿತು. ಈ ಮಹಾ ಸಂಸ್ಥೆಯ ಕೇಂದ್ರಶಕ್ತಿ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು. ಅವರ ಪಟ್ಟಾಧಿಕಾರ ಸುವರ್ಣ ಮಹೋತ್ಸವವು, ಅವರು ಸಲ್ಲಿಸಿದ ಸಾರ್ವತ್ರಿಕ ಸೇವಾ ಧರ್ಮದ ಸಂಕೇತ, ರಾಷ್ಟ್ರದ ಅನೇಕ ಗಣ್ಯರಿಂದ ಅವರು ಸಲ್ಲಿಸಿದ ಸೇವಾ ಕೈಂಕರ್ಯದ ಸಂಸ್ತುತ್ಯ ನುಡಿ.

ಅನೇಕ ಮಠಾಧಿಪತಿಗಳಿಂದ ಶ್ರೀ ಕ್ಷೇತ್ರ ಸೇವಾಕಾರ್ಯ ಇತೋಪ್ಯತಿಶಯವಾಗಿ ನಡೆದುಬರಲೆಂದು ಹಾರೈಕೆ. ನೆರೆದ ಸದ್ಭಕ್ತ ಸಮುದಾಯ ಶ್ರೀ ಕ್ಷೇತ್ರ ಮತ್ತು ಶ್ರೀ ಶ್ರೀಗಳವರ ಆಶ್ರಯ ಮತ್ತು ಆಶೀರ್ವಾದ ನಿರಂತರವಾಗಿ ದೊರೆಯುತ್ತಿರಲಿ, ಪೂಜ್ಯರ ಮಾರ್ಗದರ್ಶನ ಈ ಶತಮಾನದವರೆಗೂ ನಡೆದುಬಂದು ಶತಮಾನೋತ್ಸವವನ್ನು ನೋಡುವ ಭಾಗ್ಯವನ್ನು ಕರುಣಿಸಲೆಂದು ದಯಾಮಯನಾದ ಪರಮಾತ್ಮನಲ್ಲಿ ಪ್ರಾರ್ಥನೆ ಸಲ್ಲಿಕೆ, 1982 ರ ಏಪ್ರಿಲ್ 24, 25 ಮತ್ತು 26 ರ ಮೂರು ದಿನ ಸಮಾರಂಭ 'ನಭೂತೋ ನಭವಿಷ್ಯತಿ' ಸುವರ್ಣ ಮಹೋತ್ಸವ ಸಮಾರಂಭ ಶ್ರೀ ಸಿದ್ಧಗಂಗಾ ಕ್ಷೇತ್ರದ ಇತಿಹಾಸ ಪುಟಗಳಲ್ಲಿ ಒಂದು ಮೈಲಿಗಲ್ಲು. ಕಣ್ಣು ಕಿವಿ ಹುಟ್ಟಿದ್ದಕ್ಕೆ ಸಾರ್ಥಕ ಎಂದು ಎಲ್ಲರ ಆತ್ಮಸಂತೋಷ.

ಅಭಿಮಾನಿಗಳ ಹೃದಯ ತುಂಬಿದ ನುಡಿಗೆ, ಶ್ರೀ ಶ್ರೀಗಳವರು ನೆರೆದಿದ್ದ ಜನಸ್ತೋಮವನ್ನು ಕುರಿತು ಆಶೀರ್ವದಿಸುತ್ತಾ, "ಭಗವಂತನ ಕೃಪೆ ತಮ್ಮ ಪೂಜ್ಯ ಗುರುಗಳ ಆಶೀರ್ವಾದ ಮತ್ತು ಅಪಾರ ಅಭಿಮಾನಿಗಳ ಸಹಕಾರಗಳು ಮುಪ್ಪುರಿಗೊಂಡುದರ ಫಲ ಈ ಬೃಹತ್ ಸಮಾರಂಭ. ಈ 50 ವರ್ಷಗಳು ಶ್ರೀ ಕ್ಷೇತ್ರದಿಂದಾದ ಕಿಂಚಿತ್ ಸೇವೆಯನ್ನು ಬೃಹತ್ತಾಗಿ ನೀವೆಲ್ಲಾ ಕಂಡಿರುವುದು ನಿಮ್ಮೆಲ್ಲರ ಹೃದಯ ವೈಶಾಲ್ಯತೆಯನ್ನು ವ್ಯಕ್ತಪಡಿಸುತ್ತದೆ" ಎಂದರು. ಸದ್ಯ ಸಮಾರಂಭದ ಯಶಸ್ಸಿಗೆ ಕಾರಣರಾದ ಸರ್ವರಿಗೂ ಅಭಿನಂದನೆ ಸಲ್ಲಿಸುತ್ತೇವೆ.

ತಾಂತ್ರಿಕ ಮತ್ತು ತಾತ್ವಿಕ ಅಡಚಣೆಗಳಿಂದಾಗಿ ಮೇ ಸಂಚಿಕೆಯು ತಡವಾಗಿ ತಮ್ಮ ಕೈಸೇರಿದುದಕ್ಕಾಗಿ ಕ್ಷಮೆ ಕೋರುತ್ತೇವೆ. ಉಳಿದ ಸಂಚಿಕೆಗಳನ್ನು ಈ ಕೂಡಲೆ ತಮ್ಮ ಕೈಸೇರುವಂತೆ ಕ್ರಮ ಕೈಗೊಳ್ಳುತ್ತಿದ್ದೇವೆ. ಸುವರ್ಣ ಮಹೋತ್ಸವದ ಉಳಿದ ಸಮಾರಂಭಗಳ ಪೂರ್ಣ ವರದಿಯನ್ನು ಮುಂದಿನ ಸಂಚಿಕೆಗಳಲ್ಲಿ ಪ್ರಕಟಿಸುತ್ತೇವೆ.

## ಸಿದ್ಧಗಂಗಾಶ್ರೀ ಬಗೆಗೆ

'ಸಿದ್ಧಗಂಗಾಶ್ರೀ' ಎಂಬ ಬೃಹದ್ಗ್ರಂಥವನ್ನು ನೋಡಿ ಅಮಿತಾನಂದವಾಯಿತು. ಭರತಖಂಡದಲ್ಲಿ ಹೇಗೋ ತಿಳಿಯದು, ಕರ್ನಾಟಕದಲ್ಲಿಯಂತೂ ಇಂತಹ ಮೇರುಕೃತಿ ಇಲ್ಲ.

ಈ ಗ್ರಂಥ ನಿರ್ಮಾಣ ಕಾರ್ಯ ಆರಂಭವಾದಂದಿನಿಂದ ಇದರ ಬೆಳವಣಿಗೆಗಳನ್ನು ನೋಡಿ ನಲಿಯುತ್ತಲಿದ್ದ ನಾನು, ಶರಣ ಚನ್ನಪ್ಪ ಎರೇಸೀಮೆ ಅವರೊಂದಿಗೆ ತಮಾಷೆಗಾಗಿ, ಈ ಗ್ರಂಥವನ್ನು ಇದಕ್ಕೊಂದು ಗುಡಿ ಕಟ್ಟಿ ಇಟ್ಟು ಪೂಜಿಸಬೇಕು ; ನೋಡಿದರೆ ಮಾಸುತ್ತದೆ, ಮುಟ್ಟಿದರೆ ಮುರುಟುತ್ತದೆ ಎಂದದ್ದುಂಟು. ಸಂಭಾವನಾ ಗ್ರಂಥಗಳಲ್ಲೆಲ್ಲಾ ಇದು ರತ್ನಪ್ರಾಯವಾಗಿದೆ ಎಂದರೆ ಉತ್ಪ್ರೇಕ್ಷೆಯಲ್ಲ. ಸಿದ್ಧಗಂಗಾಶ್ರೀ ಇದು ನಮ್ಮ ಬೆಳಗೊಳದ ಶ್ರೀ ಗೊಮ್ಮಟ, ನಮ್ಮವರ ಕೈಲಾಸ ದೇವಾಲಯ, ನಮ್ಮವರ 'ಗ್ರಂಥಸಾಹಿಬ್', ನಮ್ಮ 'ಜಗದ್ಗುರು'.

ಗುಣ, ಗಾತ್ರ, ಗೌರವ, ಸೌಂದರ್ಯ, ಸೊಬಗು—ಯಾವ ದೃಷ್ಟಿಯಿಂದ ನೋಡಿದರೂ ಬಹು ಮೇಲಾಗಿರುವ ಈ ಗ್ರಂಥ ತಮ್ಮ ವ್ಯಕ್ತಿತ್ವದ ಔನ್ನತ್ಯವನ್ನು ಸಾರುವಂತಹುದಾಗಿದೆ. ನಮ್ಮ ಹಿಂದಿನವರು ಸಂಸ್ಕೃತಿ ಧರ್ಮಗಳ ಪ್ರಸಾರಕ್ಕಾಗಿ ಶಾಸ್ತ್ರದಾನ, ಅನ್ನದಾನ, ಅಭಯದಾನ, ಭೈಷಜ್ಯದಾನಾದಿಗಳು ಮಾಡುತ್ತಿದ್ದರೆಂದು ಓದಿದ್ದೆ ; ಈಗ ನೋಡಿದೆ ; ಕೃತಾರ್ಥನಾದೆ !

ಪರಮ ಪದವಿಯನ್ನು ಪಡೆಯಲೆಳಸುವವರಿಗೆ ಇದೊಂದೇ ಗ್ರಂಥ ಸಾಕು.

ಇಂತಹ ಬಹು ಮಹತ್ವದ ಕೆಲಸವನ್ನು ಮಾಡಿಸಿದ ಮತ್ತು ಮಾಡಿದ ಭಕ್ತರು ನಿಜವಾದ ಭಾಗ್ಯವಂತರು. ಅವರೆಲ್ಲ ಕೇವಲ ಶ್ರದ್ಧಾಭಕ್ತಿಗಳಿಂದ ಪ್ರೇರಿತರಾಗಿ ಈ ಕೆಲಸ ಮಾಡಿದ್ದಾರೆಯೇ ಹೊರತು ಮತ್ತಾವ ಆಸೆ ಭರವಸೆಗಳನ್ನು ನಿರೀಕ್ಷಿಸಿ ಮಾಡಿಲ್ಲ ಎಂದು ನನಗನ್ನಿಸಿದೆ. ಇದೆಲ್ಲಕ್ಕೂ ಪೂಜ್ಯರ ಕೃಪೆಯೇ ಕಾರಣ ಮತ್ತು ಪ್ರೇರಣೆ.

ಈ ಮಹಾ ಮಣಿಹದಲ್ಲಿ 'ಕಿಂಚಿತ್' ಪಾಲ್ಗೊಳ್ಳುವ ಅವಕಾಶ ಸಿಕ್ಕಿದ್ದು ನನ್ನ ಸೌಭಾಗ್ಯ.

—ಎಚ್. ದೇವೀರಪ್ಪ
ವಿಜಯ ನಗರ ಬೆಂಗಳೂರು.
14-5-1982



ಈಚೆಗೆ ಸಿದ್ಧಗಂಗೆಯಲ್ಲಿ ನಡೆದ ವೈಭವದ ಉತ್ಸವಗಳ ವರದಿಯನ್ನು ಓದಿ, ಕೇಳಿ ಅತ್ಯಂತ ಹರ್ಷಗೊಂಡಿದ್ದೇನೆ. ಅದರಲ್ಲಿ ಪಾಲ್ಗೊಂಡು ಪ್ರತ್ಯಕ್ಷವಾಗಿ ಕಂಡು ಹರ್ಷಿಸುವ ಭಾಗ್ಯ ನನಗೆ ಸಾಧ್ಯವಾಗದೆ ಹೋದದ್ದು ನನ್ನ ದುರ್ದೈವ.

ಈ ಸಂದರ್ಭದಲ್ಲಿ ಪ್ರಕಟವಾದ "ಸಿದ್ಧಗಂಗಾಶ್ರೀ" ಎಂಬ ಹೆಸರಿನ ಅನ್ವರ್ಥವಾದ ಸುವರ್ಣ ಮಹೋತ್ಸವ ಸ್ಮಾರಕ ಗ್ರಂಥವನ್ನು ನೋಡಿ ಮೂಕವಿಸ್ಮಿತನಾಗಿದ್ದೇನೆ. ಇಷ್ಟೊಂದು ವಿಸ್ತೃತವಾದ ಅಚ್ಚುಕಟ್ಟಾದ ಸ್ಮಾರಕ ಗ್ರಂಥವನ್ನು ನಾನು ಕನ್ನಡದಲ್ಲಿ ನೋಡಿಲ್ಲ. ಎಷ್ಟು ಬಗೆಯ ವಿವರಗಳು, ಎಷ್ಟು ಬಗೆಯ ವಿಸ್ಮಯಗಳು, ಎಷ್ಟು ಬಗೆಯ ಚಿತ್ರಗಳು ! ಶ್ರೀ ಶ್ರೀಗಳ ಬದುಕಿನ, ಕಾಯಕದ, ಚಟುವಟಿಕೆಗಳ ಸಮಗ್ರ ಚಿತ್ರಣ ಇದರಲ್ಲುಂಟು. ಕ್ಷೇತ್ರಶ್ರೀ, ದರ್ಶನಶ್ರೀ, ಸಾಹಿತ್ಯಶ್ರೀ—ಈ ಮೂರು ಶ್ರೀಗಳ ಶೋಭೆಯಿಂದ ಮೈದುಂಬಿದ ವಿಭಿನ್ನ ಲೇಖನ ರಾಶಿಗಳು ಗ್ರಂಥ ಸಂಪಾದಕರ ಅವಿರತ ಶ್ರಮವನ್ನೂ ಗ್ರಂಥ ಸಂಪಾದನ ಸಾಮರ್ಥ್ಯವನ್ನೂ ಸ್ಫುಟವಾಗಿ ಎತ್ತಿ ತೋರಿಸುತ್ತವೆ ; ಅವರ ಭಕ್ತಿ ಶ್ರದ್ಧೆಗಳನ್ನು ವ್ಯಕ್ತಪಡಿಸುತ್ತವೆ. ಮೂಲೆ ಮೂಲೆಗಳನ್ನು ಹೊಕ್ಕು ಹೆಕ್ಕಿ ವಿಷಯಗಳನ್ನು ತಂದು ಜೋಡಿಸಿದ ಸಾಹಸ, ತುಂಬ ಮೆಚ್ಚುವಂತಹದು. ವರ್ಣಚಿತ್ರಗಳು ಈ ಗ್ರಂಥಕ್ಕೆ ಇನ್ನಿಲ್ಲದ ಸೌಂದರ್ಯವನ್ನು ಪೋಷಿಸಿವೆ.

ಆಶ್ಚರ್ಯೋವಕ್ತಾ, ಆಶ್ಚರ್ಯಃ ಶ್ರೋತಾ, ಆಶ್ಚರ್ಯಃ ಕರ್ತಾ ಆಶ್ಚರ್ಯ ಆಚಾರ್ಯಃ! ಇದರ ರಚನೆಗೆ ಪ್ರೇರಕ ಶಕ್ತಿಯಾದ ಪೂಜ್ಯರಿಗೂ ಅವಿಚ್ಛಿನ್ನಶ್ರಮದಿಂದ ಗ್ರಂಥವನ್ನು ಬೆಳಕಿಗೆ ತಂದ ಸಂಪಾದಕರಿಗೂ ಅನಂತ ನಮನಗಳು.

—ಎನ್. ರಂಗನಾಥಶರ್ಮ
ಬೆಂಗಳೂರು 4-5-82

"ಸಿದ್ಧಗಂಗಾಶ್ರೀ ಎಂಬ ಅಭಿನಂದನ ಗ್ರಂಥವು ಅನೇಕ ವಿಧದಲ್ಲಿ ಅಪೂರ್ವವಾಗಿದೆ. ಇದುವರೆಗೆ ಗಣ್ಯರಿಗೆ ಅರ್ಪಿಸಿರುವ ಅನೇಕ ಅಭಿನಂದನ ಗ್ರಂಥಗಳೆಲ್ಲಕ್ಕಿಂತ ಇದು ವಿಷಯಸಂಗ್ರಹಣೆ, ಸನ್ನಿಧಿಯವರ ಹಾಗು ಕ್ಷೇತ್ರದ ಕಾರ್ಯಕಲಾಪಗಳನ್ನು ವಿವಿಧ ಹೆಸರಾಂತ ವ್ಯಕ್ತಿಗಳ ಲೇಖನಗಳ ಮೂಲಕ ಪರಿಚಯ ಮಾಡಿಕೊಟ್ಟಿರುವುದರಲ್ಲಿ ಅತ್ಯಮೋಘವಾಗಿ ಒಂದು ಮೇರು ಕೃತಿಯಾಗಿದೆ ಎಂದೇ ಹೇಳಬೇಕು....ಕ್ಷೇತ್ರಶ್ರೀ ವಿಭಾಗದಲ್ಲಿರುವ ಚಿತ್ರಗಳನ್ನು ಬಹಳ ಕಷ್ಟಪಟ್ಟು ಸಂಗ್ರಹಿಸಿ ಮುದ್ರಣ ಮಾಡಿರುವುದು ಈ ಗ್ರಂಥದ ಒಂದು ವಿಶೇಷವಾಗಿದೆ.........ಈ ಗ್ರಂಥ ಇತರ ಸಂಭಾವನಾ ಗ್ರಂಥಗಳನ್ನೆಲ್ಲ ಮೀರಿಸಿದ ಒಂದು ದಾಖಲೆಯಾಗಿರುವುದೂ ಸಂತಸದ ಸಂಗತಿ"

—ಕೆ. ಎಂ. ರುದ್ರಪ್ಪ, B.A,LLB ,
ಹಾಸನ

"ಸಿದ್ಧಗಂಗಾಶ್ರೀ ಅಭೂತಪೂರ್ವವಾದ ಅಭಿನಂದನ ಸಂಪುಟ. ಸಂಪಾದಕರ ಪರಿಶ್ರಮ ಸಾರ್ಥಕವಾಗಿದೆ. ದರ್ಶನ ಮತ್ತು ಕನ್ನಡ ಭಾಷಾ ಸಂಸ್ಕೃತಿಯ ಅಧ್ಯಯನಕ್ಕೆ ಇದು ಒಂದು ಅಮೂಲ್ಯ ಆಕರ ಗ್ರಂಥವೆನಿಸಿದೆ."

—ಗೌ. ಮ. ಉಮಾಪತಿ ಶಾಸ್ತ್ರಿ

"ಪೂಜ್ಯ ಶ್ರೀಗಳವರ ಮಹಾಕಾರ್ಯ" ಕ್ಷೇತ್ರದ ಸಮಗ್ರ ಇತಿಹಾಸವನ್ನೊಳಗೊಂಡ 'ಸಿದ್ಧಗಂಗಾಶ್ರೀ' ಅಭಿನಂದನ ಬೃಹತ್ ಕೃತಿರತ್ನವು ಅತ್ಯಂತ ಸುಂದರವೂ, ಸುಜ್ಞಾನ ಬೋಧಾತ್ಮಕವೂ ಆದುದಲ್ಲದೆ ಸಾಹಿತ್ಯ ಸಾಗರವೆನಿಸಿ, ಸಮಗ್ರ ಸಾಹಿತ್ಯ ಕ್ಷೇತ್ರದಲ್ಲಿ ಅತ್ಯದ್ಭುತ ಕಲಾತ್ಮಕ ಕೃತಿರತ್ನವೆನಿಸಿ ಮೆರೆಯುತ್ತಿದೆ."

—ನೊಟಗಿ ಮಲ್ಲಿಕಾರ್ಜುನ ಅಥಣಿ

'ಸಿದ್ಧಗಂಗಾಶ್ರೀ'ಯನ್ನು ಕಂಡವರೆಲ್ಲ ಆಶ್ಚರ್ಯ ಸೂಚಿಸುತ್ತ ಇದೊಂದು ಸಾಹಸದ ಕೃತಿಯೆಂದು ಶ್ಲಾಘಿಸುತ್ತಿದ್ದಾರೆ. ಸಂಪಾದಕರ ಶ್ರಮ ಸಾರ್ಥಕಗೊಂಡಿದೆ. ಎಲ್ಲ ದೃಷ್ಟಿಯಿಂದಲೂ ಇಂಥ ಒಂದು ಸಂಭಾವನಾ ಕೃತಿ ಇದುವರೆಗೆ ಬಂದಿಲ್ಲ.'

—ಪಿ. ಆರ್. ತಿಪ್ಪೇಸ್ವಾಮಿ

'ಸಿದ್ಧಗಂಗಾಶ್ರೀ' ವಿಕ್ರಮ ಸಾಧಿಸಿದೆ, ಚಿರಂತನ ಮೌಲ್ಯಗಳ ಮಡುವಾಗಿದೆ. ಎಲ್ಲ ದೃಷ್ಟಿಯಿಂದಲೂ ಈ ಕೃತಿರತ್ನ ಪರಿಪೂರ್ಣತೆ ಪಡೆದಿದೆ. ಸಂಪಾದಕರ ಶ್ರಮ ಸಾರ್ಥಕವಾಗಿದೆ, ಇದರ ಸಂಕ್ಷಿಪ್ತ ವಿವರಗಳನ್ನು ಈಗಾಗಲೇ ನಾನು 'ಪ್ರಜಾಜ್ಯೋತಿಗೆ' ಬರೆದು ಕಳಿಸಿದ್ದೇನೆ.

—ಎಸ್. ಎಸ್. ಭೂಸರೆಡ್ಡಿ





# ಪರಮಪೂಜ್ಯ ಶ್ರೀ ಶ್ರೀಗಳವರ ಅತಿ ಸಂಕ್ಷಿಪ್ತ ದಿವ್ಯೋದಂತ

—ಕೋರಂಬ

ಜನನ : 'ವೀರಾಪುರ' ಬೆಂಗಳೂರು ಜಿಲ್ಲೆಯ ಮಾಗಡಿ ತಾಲ್ಲೂಕಿಗೆ ಸೇರಿದ ಸಣ್ಣ ಗ್ರಾಮ. ಅದು ವೇದದಲ್ಲಿ 'ಕಕುದ್ಗಿರಿ' ಎಂದು ಕರೆದಿರುವ, ಲೋಕದಲ್ಲಿ 'ದಕ್ಷಿಣಕಾಶಿ' ಎಂದು ಪ್ರಸಿದ್ಧವಾಗಿರುವ, ಪ್ರಸಿದ್ಧ ಶೈವಕ್ಷೇತ್ರವೆನಿಸಿರುವ ಶಿವಗಂಗೆಯಿಂದ ದಕ್ಷಿಣಕ್ಕೆ ಕ್ರೋಶ ಮಾತ್ರ ದೂರದಲ್ಲಿದೆ. ಈ ಕೃಷಿಪ್ರಧಾನವಾದ ಗ್ರಾಮವೇ ಶ್ರೀ ಶ್ರೀ (   ) ಗಳವರಿಗೆ ಜನ್ಮವಿತ್ತ ಪುಣ್ಯಭೂಮಿ.

ಪಟೇಲ್ ಹೊನ್ನಪ್ಪ ಮತ್ತು ಗಂಗಮ್ಮ ಆ ಊರಿನ ಪುಣ್ಯ ದಂಪತಿಗಳು. ಆ ಸಾತ್ವಿಕ ದಂಪತಿಗಳ ದಿವ್ಯಗರ್ಭಾಂಬುಧಿಯಲ್ಲಿ ದಿನಾಂಕ 1-4-1908 ರ ಪುಣ್ಯದಿನದಂದು ಶುಭ ಬ್ರಾಹ್ಮೀ ಮುಹೂರ್ತದಲ್ಲಿ ಶಿವಣ್ಣನವರು (ಶ್ರೀ ಶ್ರೀಗಳವರ ಪೂರ್ವಾಶ್ರಮದ ಶುಭನಾಮ) ಜನ್ಮತಾಳಿದರು.)

ಬಾಲ್ಯ : ಶಿವಣ್ಣನವರಿಗೆ ಬಾಲ್ಯದಲ್ಲಿಯೇ ದಾನ-ದಯಾದಿ ಸದ್ಗುಣಗಳು, ಶೈವ ಭಕ್ತಿ, ವಿಷಯ ವಿಮುಖತೆ, ಚಿತ್ತೈಕಾಗ್ರತೆ, ಸದಾಚಾರಾದಿ ಸದ್ವಿಷಯಂಗಳು ತಂದೆ ತಾಯಿಗಳಿಂದ ಉಪಹಾರೀಕೃತವಾಗಿದ್ದುವು. ಶ್ರಾವಣಮಾಸಾದಿ ವಿಶಿಷ್ಟ ಸಮಯಗಳಲ್ಲಿ ಮನೆಯಲ್ಲಿ ನಡೆಯುತ್ತಿದ್ದ ಶರಣಲೀಲಾಮೃತಾದಿ ಸದ್ಗ್ರಂಥಗಳ ಪಠಣ ಪ್ರವಚನ ಶಿವಣ್ಣನ ಚಿತ್ತದಲ್ಲಿ ಭೂರಿಸಂಸ್ಕಾರವನ್ನು ಅಚ್ಚೊತ್ತಿತು. ಶಿವಣ್ಣನ ಮಾಹಾತ್ಮ್ಯನಿರ್ಮಾಣ ಭೂಮಿಕೆಯಲ್ಲಿ ಮಾತೃಸ್ಥಾನ ಹಿರಿದಾದುದು. ತಾಯಿ ಗಂಗಮ್ಮ ವಾರಕ್ಕೊಮ್ಮೆಯಾದರೂ ಶಿವಣ್ಣನನ್ನು ಶಿವಗಂಗಾ ಕ್ಷೇತ್ರಕ್ಕೆ ಕರೆದೊಯ್ಯು

ತ್ತಿದ್ದರು. ಶಿವಣ್ಣ ಅಲ್ಲಿ ನಿಸರ್ಗರಮಣೀಯವಾದ ಗಿರಿಕಾನನವನ್ನು, ಶಿಲಾದಿ ಪ್ರಾಕೃತಿಕ ವಸ್ತುಗಳನ್ನು ನೋಡುತ್ತಾ, ನೋಡುತ್ತಾ, ತನ್ಮಯತೆಯನ್ನು ಪಡೆಯುತ್ತಿದ್ದರು. ಆಗವರ ಅಂತರಾತ್ಮದಲ್ಲಿ ನಿಖಿಲೇಶ್ವರನಾದ ಶಿವನ ಸೃಷ್ಟಿಯ ಲೀಲೆ ಮೂಲಮಂತ್ರಾಕ್ಷರಗಳಿಂದ ಮುದ್ರಿತವಾಗುತ್ತಿತ್ತು. ಗಂಗಾಧರೇಶ್ವರ ಹೊನ್ನಾದೇವಿಯವರ ದರ್ಶನ ಪೂಜಾದಿಗಳು ಚಿತ್ತದಲ್ಲಿ ದೈವಭಕ್ತಿಯನ್ನು ನೆಲೆಗೊಳಿಸಿದ್ದವು.

**ಪ್ರಾರಂಭಿಕ ವಿದ್ಯಾಭ್ಯಾಸ :** ಹುಟ್ಟಿದೂರಾದ ವೀರಾಪುರದ ಕೂಲಿಮಠದಲ್ಲಿಯೇ ಶಿವಣ್ಣನ ವಿದ್ಯಾಭ್ಯಾಸ ಪ್ರಾರಂಭವಾಯಿತು. ನಂತರ ಪಕ್ಕದ ಊರಾದ ಪಾಲನಹಳ್ಳಿಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಂದುವರಿಯಿತು. ಅಷ್ಟರಲ್ಲಿ ತನ್ನ ಎಂಟನೆಯ ವರ್ಷದಲ್ಲಿ ಶಿವಣ್ಣನಿಗೆ ಮಾತೃವಿಯೋಗವುಂಟಾಯಿತು. ಈ ಘಟನೆ ದಾರುಣಪ್ರಭಾವ ಬೀರಿದರೂ ಸಹಜ ಧೈರ್ಯ ಸ್ವಭಾವವುಳ್ಳ ಶಿವಣ್ಣ ಇದರಿಂದ ನಿರ್ವಿಣ್ಣನಾಗಲಿಲ್ಲ. ಮೇಲಾಗಿ ಅದು ಮುಂಬರುವ ಕಷ್ಟಗಳನ್ನು ಹೊರುವ ಶಕ್ತಿಯನ್ನು ತಂದುಕೊಟ್ಟಿತು.

ಮಾತೃವಿಯೋಗಾನಂತರ ಸ್ವಲ್ಪಕಾಲ ಶಿವಣ್ಣನ ವಿದ್ಯಾಭ್ಯಾಸ ಗುಂಡಿಗೆರೆಯ ಅಕ್ಕನ ಮನೆಯಲ್ಲಿ ಮುಂದುವರಿಯಿತು. ನಂತರ ಅಲ್ಲಿಂದ ನಾಗವಲ್ಲಿಯ ಅಕ್ಕನ ಮನೆಗೆ ವರ್ಗವಾಯಿತು. ಅಲ್ಲಿ ತನ್ನ ವಿನಯ ಮತ್ತು ಮೇಧಾಶಕ್ತಿಗಳಿಂದ ಉಪಾಧ್ಯಾಯರೆಲ್ಲರ ಮತ್ತು ಸಹಪಾಠಿಗಳೆಲ್ಲರ ಹೃನ್ಮನಗಳನ್ನು ಗೆದ್ದರು. 1919 ರಲ್ಲಿ ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆಯನ್ನು, 1921 ರಲ್ಲಿ ಹೈಯರ್ ಸೆಕೆಂಡರಿ ಪರೀಕ್ಷೆಯನ್ನೂ ಪ್ರಥಮ ಶ್ರೇಣಿಯಲ್ಲಿ ಪಾಸು ಮಾಡಿದರು.

**ಸಿದ್ಧಗಂಗೆಯ ಸಂಬಂಧ :** ನಂತರ ಮುಂದಿನ ವಿದ್ಯಾಭ್ಯಾಸಕ್ಕೆಂದು ತುಮಕೂರಿಗೆ ಬಂದು 1922 ರಲ್ಲಿ ಪ್ರೌಢಶಾಲೆಗೆ ಸೇರಿದರು. ಸಮನಂತರಮೇವ ಸಿದ್ಧಗಂಗಾ ಮಠದಿಂದ ಹೈಸ್ಕೂಲಿಗೆ ಬರುತ್ತಿದ್ದ ಕಾಳಪ್ಪ ಎಂಬುವರು (ಈಗಿನ ಕನಕಪುರ ದೇಗುಲ ಮಠಾಧ್ಯಕ್ಷರಾಗಿರುವ ಶ್ರೀ ಶ್ರೀ ಮಹಾಲಿಂಗ ಮಹಾ ಸ್ವಾಮಿಗಳು,) ಇವರ ಸಹಪಾಠಿಯಾದರು, ಆತ್ಮೀಯರಾದರು. ಅವರೀರ್ವರ ಸ್ನೇಹಸಂವರ್ಧನೆಯೇ ಶಿವಣ್ಣನವರಿಗೂ ಸಿದ್ಧಗಂಗೆಗೂ ಸಂಬಂಧವೇರ್ಪಡುವುದಕ್ಕೆ ನಾಂದಿಯಾಯಿತೆನ್ನಬಹುದು. ಮಿತ್ರ ಕಾಳಪ್ಪನವರೊಂದಿಗೆ ಆಗಿಂದಾಗ್ಗೆ ಸಿದ್ಧಗಂಗೆಗೆ ಹೋಗಿಬರುವುದಕ್ಕೆ ಪ್ರಾರಂಭಿಸಿದರು. ಸಿದ್ಧಗಂಗೆಯ ನಿಸರ್ಗರಮಣೀಯತೆಗೆ ಮನಸೋಲುತ್ತಿದ್ದರು. ಆದರೆ ಉದ್ದಾನ ಶಿವಯೋಗಿಗಳೊಡನೆ ಮಾತನಾಡಲು ಮನಹಿಂತೆಗೆಯುತ್ತಿದ್ದರು. ಆಗಿನ ಉತ್ತರಾಧಿಕಾರಿಗಳಾಗಿದ್ದ ಶ್ರೀ ಮರುಳಾರಾಧ್ಯರವರೊಡನೆ ಅಷ್ಟೇ ಸಲಿಗೆಯಿಂದ ಇರುತ್ತಿದ್ದರು.

1924 ರಲ್ಲಿ ಶಿವಣ್ಣನವರು ಮೆಟ್ರಿಕ್ಯುಲೇಷನ್ ಪಾಸುಮಾಡಿ ಎಂಟ್ರೆನ್ಸ್ ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿತ್ತು. ಆ ಹೊತ್ತಿಗೆ ಪ್ಲೇಗು ಮಹಾಮಾರಿಯಂತೆ ಹಬ್ಬಿತು.



ಅದರ ಉಪಪ್ರವದಿಂದ ತುಮಕೂರನ್ನು ಬಿಡಬೇಕಾಯಿತು. ಸಿದ್ಧಗಂಗೆಯಲ್ಲಿ ಆಶ್ರಯ ಬೇಡಿ ಬಂದಾಗ ಅದೂ ತಿರಸ್ಕೃತವಾಯಿತು. ಕೊನೆಗೆ ಪಕ್ಕದ 'ಶೆಟ್ಟಿಹಳ್ಳಿ' ಎಂಬ ಊರಿನಲ್ಲಿ ರೂಂ ಒಂದನ್ನು ಬಾಡಿಗೆ ಹಿಡಿದು, ಸ್ವತಃ ಅಡಿಗೆ ಮಾಡಿಕೊಂಡು ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಈ ವಿಷಯ ಹೇಗೋ ಕರ್ಣಾಕರ್ಣಿ ಉದ್ದಾನ ಸ್ವಾಮಿಗಳ ಕಿವಿಗೂ ಬಿತ್ತು. ಆಗ ಪರೀಕ್ಷೆ ಮುಗಿಯುವ ತನಕ ಮಾತ್ರ ಮಠದಲ್ಲಿ ಆಶ್ರಯ ದೊರಕಿತು. ಹೀಗೆ ಮಠದಲ್ಲಿ ಆಶ್ರಯ ಪಡೆದು 1927 ರಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯನ್ನು ಪ್ರಥಮ ಶ್ರೇಣಿಯಲ್ಲಿ ಪಾಸುಮಾಡಿದರು.

ಶ್ರೀ ಕ್ಷೇತ್ರದಲ್ಲಿ ಈ ಮೂರು ತಿಂಗಳ ವಾಸ್ತವ್ಯ ಕಾಳಪ್ಪ ಮತ್ತು ಶ್ರೀ ಮರುಳಾರಾಧ್ಯರೊಡನೆ ಮಧುರಬಾಂಧವ್ಯದ ಬೆಸುಗೆಗೆ ಕಾರಣವಾಯಿತೆನ್ನಬಹುದು. ಅಗಾಧ ತೇಜಶ್ಶಾಲಿಯಾದ ಈ ಹುಡುಗನ ಮೇಲೆ ಉದ್ದಾನ ಶಿವಯೋಗಿಗಳವರ ಅನುಗ್ರಹಪೂರಕ ದೃಷ್ಟಿಯೂ ಬಿತ್ತು. ಅಷ್ಟೇಕೆ ಶಿವಣ್ಣನ ಹೆಸರೇ ಮಠದ ತುಂಬ ಪ್ರತಿಧ್ವನಿತವಾಯಿತು.

**ಉಚ್ಚ ಶಿಕ್ಷಣ :** ಎಂಟ್ರೆನ್ಸ್ ಪರೀಕ್ಷೆ ಮುಗಿದನಂತರ "ಚೆನ್ನಾಗಿ ಓದಬೇಕು, ಚೆನ್ನಾಗಿರಬೇಕು, ಆಗಾಗ ಮಠಕ್ಕೆ ಬರುತ್ತಾ ಇರು, ತಿಳಿತೋ" ಶ್ರೀಮದುದ್ದಾನ ಶಿವಯೋಗಿಗಳ ಆಜ್ಞಾನುಗ್ರಹಗಳನ್ನು ಹೊತ್ತು ಶಿವಣ್ಣನವರು ಪದವಿ ಶಿಕ್ಷಣಕ್ಕಾಗಿ ಬೆಂಗಳೂರಿಗೆ ತೆರಳಿದರು. ಅಲ್ಲಿ ಸೆಂಟ್ರಲ್ ಕಾಲೇಜಿಗೆ ಸೇರಿ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು, ಶ್ರೀ ಟಿ. ಎಸ್. ವೆಂಕಣ್ಣಯ್ಯನವರಂಥ ಹೆಸರಾಂತ ಪ್ರಾಧ್ಯಾಪಕರ ಮೆಚ್ಚುಗೆಯನ್ನು ಗಳಿಸಿಕೊಂಡರು. ಆಚಾರ-ವಿಚಾರಗಳಲ್ಲಿ ಪ್ರಭಾವಿತರಾದರು. ಪ್ರಥಮ, ದ್ವಿತೀಯ ಬಿ.ಎ. ತರಗತಿಗಳಲ್ಲಿ ಉತ್ತಮತೆಯಿಂದ ಉತ್ತೀರ್ಣರಾಗಿ ಅಂತಿಮ ಬಿ.ಎ. ತರಗತಿಯಲ್ಲಿ ವ್ಯಾಸಂಗವನ್ನು ಮುಂದುವರಿಸಿದರು.

**ನಮಸ್ಕಾರ ಹಾಕಿಬಿಡು :** ಪರೀಕ್ಷಾವಧಿ ಸಮೀಪಿಸಿತ್ತು. ಶಿವಣ್ಣನವರು ತದೇಕಚಿತ್ತರಾಗಿ ವ್ಯಾಸಂಗದಲ್ಲಿ ತಲ್ಲೀನರಾಗಿದ್ದರು. ಇದ್ದಕ್ಕಿದ್ದಂತೆ ದುರ್ದಿನವೊಂದು ಘಟಿಸಿತು. (16–1–1930) ಶ್ರೀಮರುಳಾರಾಧ್ಯ ಸ್ವಾಮಿಗಳು ಅವಿರಳಲಿಂಗಸಂಗಿಗಳಾದರೆಂಬ ಸುದ್ದಿ ಸಿದ್ಧಗಂಗೆಯಿಂದ ಹೋಯಿತು. ಝಟಿತಿ ಶಿವಣ್ಣನವರು ಬೆಂಗಳೂರಿನಿಂದ ಹೊರಟುಬಂದರು. ಇತ್ತ ಶ್ರೀ ಉದ್ದಾನ ಶಿವಯೋಗಿಗಳ ಮನಸ್ಸಿನಲ್ಲಿ "ಮುಂದೆ ಈ ಮಠದ ಗುರುತರ ಹೊಣೆ ಹೊರುವ ಸುಸಮರ್ಥ ವ್ಯಕ್ತಿ ಯಾರು? ಆ ಯಾರನ್ನು ಈ ಸ್ಥಾನದಲ್ಲಿ ನಿಯೋಜಿಸಲಿ?" ಇತ್ಯಾದಿ ಚಿಂತೆ ಆವರಿಸಿತು. ಆ ಕೂಡಲೆ ಅವರ ಹೃದಯದಲ್ಲಿ ಶಿವಣ್ಣನವರ ಚಿತ್ರ ಮೂಡಿ ನಿಂತಿತು. ತಕ್ಷಣ ಕರೆದು "ಶಿವಣ್ಣ ನೀನೇ ಈ ಮಠದ ಭಾರವನ್ನು ಹೊರಲು ಸುಸಮರ್ಥನಾದ ವ್ಯಕ್ತಿ. ಸಿದ್ಧಲಿಂಗೇಶ್ವರನ ಪ್ರತಿನಿಧಿಯಾಗಿ ನಿಂತು ಇತೋಪ್ಯತಿಶಯವಾದ ಅನ್ನದಾನಾದಿ

ಸತ್ಕಾರ್ಯಗಳಲ್ಲಿ ಬದ್ಧಕಟಿಯಾಗು, ಇದು ನನ್ನ ಅಭಿಪ್ರಾಯವಲ್ಲ, ಪರಂತು ಶ್ರೀ ಸಿದ್ಧಲಿಂಗೇಶ್ವರನ ಸಂಕಲ್ಪವೆಂದು ಭಾವಿಸು. ಮತ್ತು ಭಕ್ತಮಹಾಜನತೆಯ ಅಭೀಷ್ಟವೆಂದು ತಿಳಿ. ಇನ್ನು ಯೋಚನೆಗೆ ಅವಕಾಶವೇ ಇಲ್ಲ, ನಮಸ್ಕಾರ ಹಾಕಿಬಿಡು" ಎಂದು ಘನಗಂಭೀರವಾಣಿಯಿಂದ ನುಡಿದು ಶಿವಣ್ಣನವರ ಮಸ್ತಕಕ್ಕೆ ಹಸ್ತಸಂಯೋಗ ಮಾಡಿದರು. ಕೂಡಲೆ ಶಿವಣ್ಣನವರು ಕ್ಷಣಕಾಲ ದಿಙ್ಮೂಢರಂತೆ, ಉದ್ಭ್ರಾಂತರಂತೆ, ತಮ್ಮನ್ನು ತಾವೇ ಮರೆತವರಂತೆ ನಿಂತುಬಿಟ್ಟರು. ಉತ್ತರ ಕ್ಷಣದಲ್ಲಿಯೇ "ಮೇರುಸದೃಶ ಈ ಮಠದ ಹೊರೆಯೆಲ್ಲಿ? ಅಲ್ಪ ಸಾಮರ್ಥ್ಯವುಳ್ಳ ನಾನೆಲ್ಲಿ? ಆದರೂ ನಮಸ್ಕಾರ ಹಾಕಿಬಿಡು ಎಂದು ಗುರುವಿನ ಆಜ್ಞೆಯಾಗಿದೆ. ತನ್ನ ಆಗಾಮೀ ಸರ್ವಶ್ರೇಯಸ್ಸಿಗೂ ಗುರುವೇ ಪ್ರಮಾಣ" ಎಂಬುದಾಗಿ ಮಹಾನ್ ನಿಶ್ಚಯ ಮಾಡಿ ಗುರುಚರಣದಲ್ಲಿ ನಮಸ್ಕಾರ ಹಾಕಿಬಿಟ್ಟರು. ಪುರುಳಾರಾಧ್ಯರ ಊರ್ಧ್ವದೇಹಕ್ರಿಯೆಯಲ್ಲಿ ಭಾಗಿಯಾಗಿದ್ದ ಮಹಾಜನ ಅದನ್ನು ಕಂಡು 'ಹರಹರ ಮಹಾದೇವ' ಎಂದು ಉನ್ಮತ್ತರಂತೆ ಉಚ್ಚಘೋಷಣೆ ಮಾಡಿತು. ನಮಸ್ಕಾರ ಹಾಕಿ ಎದ್ದು ನಿಂತ ಶಿವಣ್ಣನವರ ಶರೀರದಲ್ಲಿ ಕಾಪಿ ಅನಿರ್ವಚನೀಯ ಅದ್ಭುತ ಶಕ್ತಿಸಂಚಾರವಾಯಿತು. ಅಲೌಕಿಕ ಆತ್ಮಪ್ರತ್ಯಯದ ಜ್ಯೋತಿಸ್ಫುಲಿಂಗ ಸ್ಫುರಿಸಿತು *

**ಜಂಗಮ ಪುಂಗವ ಮಹಾ ಮಾಲಿಕೆಯಲ್ಲಿ ಸಂಗತ :** ನಂತರ 'ಶ್ರೀ ಶ್ರೀ ಶಿವಕುಮಾರಸ್ವಾಮಿಗಳು' ಎಂಬ ನೂತನಶುಭನಾಮಸಂಗೃಹೀತರಾಗಿ ವಿದ್ಯಾಭ್ಯಾಸವನ್ನು ಮುಂದುವರಿಸಲು ಬೆಂಗಳೂರಿಗೆ ತೆರಳಿದರು. ಈ ಸಂತಸದ ಸುದ್ದಿ ಕೇಳಿ ಕಾಲೇಜಿನ ಉಪಾಧ್ಯಾಯರಿಂದ, ಸಹಪಾಠಿಗಳಿಂದ ಮತ್ತು ಇತರರಿಂದ ಅಭಿನಂದನೆಯ ಸುರಿಮಳೆಗರೆಯಿತು. ಹೀಗೆ ಅಭಿನಂದನೆಯ ಸುರಿಮಳೆ ಒಂದು ಕಡೆ, ಆದರೆ ಅವರ ಪೂರ್ವಾಶ್ರಮ ಬಂಧುಗಳಿಂದ ಸನ್ಯಾಸಗ್ರಹಣ ವಿರೋಧಕ ಸೂಚನೆಗಳೂ ಮತ್ತೊಂದು ಕಡೆ ಜಾಸ್ತಿಯಾದವು. ಆದಷ್ಟು ಶೀಘ್ರವಾಗಿ ಯಥಾವಿಧಿ ಉತ್ತರಾಧಿಕಾರ ಪದವಿಯನ್ನು ಕೊಡುವಂತೆ ಗುರುಗಳಿಗೆ ಕಾಗದ ಬರೆದರು. ಅದರಂತೆ ದಿನಾಂಕ 3–3–1930 ರ ಶುಭದಿನದಂದು ನಿರಂಜನಜಂಗಮಾಧಿಕಾರವನ್ನು ಮಹೋತ್ಸವ ಪುರಸ್ಸರವಾಗಿ ನೀಡಿ ಹರಸಿದರು. ಅಂದಿನಿಂದ ಸಿದ್ಧಗಂಗಾ ಮಠದ ಜಂಗಮಪುಂಗವ ಮಹಾ ಮಾಲಿಕೆಯಲ್ಲಿ ಸಂಗತರಾದರು.

---

* ಇಂಥ ಅಭೂತಪೂರ್ವ ದೃಶ್ಯವನ್ನು ಹತ್ತಿರದಿಂದ ಕಂಡವರು ಇಂದಿಗೂ ಅನೇಕ ಮಂದಿ ಇದ್ದಾರೆ. ಅಂತಹವರ ಪೈಕಿ ಹಗಲಿರುಳೂ ಶ್ರೀಮಠದ ಕೈಂಕರ್ಯದಲ್ಲಿಯೇ ತಮ್ಮ ಬದುಕನ್ನು ಮುಡುಪಾಗಿಟ್ಟು, ಸಂಸ್ಕೃತ ಪ್ರಾಧ್ಯಾಪಕರಾಗಿ ನಿವೃತ್ತರಾಗಿರುವ ವಿದ್ವಾನ್ ಶ್ರೀ ಬಿ. ಗಂಗಪ್ಪನವರೂ ಒಬ್ಬರು. ಇಂದಿಗೂ ಅವರು ಈ ಸಂಗತಿಯನ್ನು ಸ್ವಾರಸ್ಯ ಕರವಾಗಿ ಹೇಳುತ್ತಾರೆ.



**ಗುರು ವಿಯೋಗ :** ಆಶ್ರಮ ಸ್ವೀಕಾರದ ನಂತರ ಶ್ರೀಮಠದ ಸಕಲ ಜವಾಬ್ದಾರಿಯೆಲ್ಲವೂ ಇವರ ಮೇಲೆಯೇ ಬಿತ್ತು. ನಂತರ ಗುರುಗಳು ನಡೆಸಿದ ಕಠಿಣತರ ಪರೀಕ್ಷೆಗಳಲ್ಲೆಲ್ಲಾ ಜಾಣ್ಮೆ–ತಾಳ್ಮೆಗಳಿಂದಲೂ, ನಿಷ್ಠೆಯಿಂದಲೂ ಜಯಗಳಿಸಿ ಯಶಸ್ವಿಯಾದರು. ತನ್ನ ಶಿಷ್ಯನ ಸಾಮರ್ಥ್ಯ ಮತ್ತು ಆತ್ಮಶಕ್ತಿಗಳ ಬೆಳವಣಿಗೆಯನ್ನು ಕಂಡು ಸಂತೃಪ್ತಿಗೊಂಡ ಶ್ರೀ ಉದ್ದಾನ ಶಿವಯೋಗಿಗಳು 11–1–1941 ರಂದು ಲಿಂಗದಲ್ಲಿ ಬೆರೆತುಹೋದರು.

**ಗುರು ತೋರಿದ ಮಾರ್ಗ :** ಗುರುಗಳ ಲಿಂಗೈಕ್ಯಾನಂತರ ಶ್ರೀಮಠದ ಪೂರ್ಣ ಜವಾಬ್ದಾರಿಯೆಲ್ಲವೂ ಶ್ರೀ ಶ್ರೀಗಳವರ ಮೇಲೆ ಬಿತ್ತು. ಅಂದಿನಿಂದ ಶ್ರೀ ಗುರುವಿನ ಅನುಗ್ರಹ ಕವಚವನ್ನು ಧರಿಸಿ, ಗುರು ತೋರಿದ ಮಾರ್ಗದಲ್ಲಿ ಮುನ್ನಡೆದರು. ಪರಮ ಪೂಜ್ಯ ಶ್ರೀ ಶ್ರೀಗಳವರ ಪಂಚ ಪರುಷಶಕ್ತಿ ಭಕ್ತರನ್ನು ಸೂಜಿಗಲ್ಲಿನಂತೆ ಆಕರ್ಷಿಸಿತು. ದಿನೇದಿನೇ ಕೊಡುಗೈದಾನಿಗಳು ಮುಂದೆ ಬಂದರು. ಅವರೇ ಶ್ರೀಮಠದ ಆಸ್ತಿಯಾದರು. ಮುಂದೆ ಮಠದ ಆರ್ಥಿಕ ಸ್ಥಿತಿಯು ಸ್ವಲ್ಪಮಟ್ಟಿಗೆ ಸುಧಾರಿತವಾಯಿತು. ಪರಮ ಪೂಜ್ಯ ಶ್ರೀ ಶ್ರೀಗಳವರೂ ಕೂಡ ತಮ್ಮ ಗುರುಗಳು ನಡೆಸಿಕೊಂಡು ಬಂದ ದಾಸೋಹವನ್ನು ಅಭಿವೃದ್ಧಿಗೊಳಿಸಿದರು. ಶ್ರೀ ಮಠವನ್ನು ಎಲ್ಲೂ ಕಂಡು ಕೇಳರಿಯದ ಅದ್ಭುತ ದಾಸೋಹ ಕೇಂದ್ರವನ್ನಾಗಿ ಮಾಡಿದರು. ವೇದ–ಸಂಸ್ಕೃತಾಭ್ಯಾಸವನ್ನು ಅತಿಶಯವಾಗಿ ಅಭಿವೃದ್ಧಿಗೊಳಿಸಿದರು. ಇಳೆಗೆ ಅನ್ನದಾನದ ಜೊತೆಗೆ ವಿದ್ಯಾದಾನವನ್ನೂ ನೀಡಿದರು. ಇದು ಶ್ರೀ ಶ್ರೀಗಳವರ ದಿವ್ಯೋದಂತದ ಪೂರ್ವಭಾಗದ ಪರಿಚಯ.

**ಲೋಕವಿದಿತ :** ಇನ್ನು ಶ್ರೀ ಶ್ರೀಗಳವರ ದಿವ್ಯೋದಂತದ ಉತ್ತರಭಾಗ ಜಗಜ್ಜಾಹಿರಾತಾಗಿದೆ. ತಮ್ಮ ಗುರುಗಳಿಂದ ಸ್ಥಾಪಿತವಾದ ಸಂಸ್ಕೃತ ಪಾಠಶಾಲೆಯನ್ನು ಕಾಲೇಜಾಗಿ ಪರಿವರ್ತನೆಗೊಳಿಸಿದುದು, ಗ್ರಾಮಾಂತರ ಪ್ರದೇಶಗಳಲ್ಲಿ ಬಡಮಕ್ಕಳ ವಿದ್ಯಾಭ್ಯಾಸಕ್ಕಾಗಿ ಶಾಲೆಗಳನ್ನು ತೆರೆದಿರುವುದು, ನಗರ ಪ್ರದೇಶಗಳಲ್ಲಿ ಕಾಲೇಜು, ಇಂಜಿನಿಯರ್ ಕಾಲೇಜು, ವೃತ್ತಿ ತರಬೇತಿ ಸಂಸ್ಥೆಗಳನ್ನು ಸ್ಥಾಪಿಸಿರುವುದು, ಒಟ್ಟಿನಲ್ಲಿ ಎಲ್ಲವೂ ಸೇರಿ ವಿಶ್ವವಿದ್ಯಾನಿಲಯವೇ ನಾಚುವಂತೆ ವಿದ್ಯಾ ಸಂಸ್ಥೆಗಳನ್ನು ಅಚ್ಚುಕಟ್ಟಾಗಿ ನಡೆಸುತ್ತಿರುವುದು ಶ್ರೀ ಶ್ರೀಗಳವರ ವಿದ್ಯಾ ಪ್ರಸಾರದ ಘನತೆಯ ಕುರುಹುಗಳಾಗಿವೆ. ಶ್ರೀ ಮಠದಲ್ಲಿ ನಡೆಯುವ ಅದ್ಭುತ ದಾಸೋಹ, ಜಾತ್ರೆ, ರಾಷ್ಟ್ರಮಟ್ಟದಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನ, ಉಪಾಧ್ಯಾಯ ಸಮ್ಮೇಳನ, ಸಂಸ್ಕೃತ ಸಮ್ಮೇಳನದಂತಹ ಸಭೆ ಸಮಾರಂಭಗಳು ಶ್ರೀ ಶ್ರೀಗಳವರ ಕರ್ತೃತ್ವ ಶಕ್ತಿಯ ದ್ಯೋತಕಗಳಾಗಿವೆ.

ಕರ್ನಾಟಕ ವಿಶ್ವವಿದ್ಯಾನಿಲಯ ಶ್ರೀ ಶ್ರೀಗಳವರಿಗೆ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿದ್ದುದು, ವಿಶ್ವ ಹಿಂದೂ ಪರಿಷತ್, ಅಖಿಲ ಭಾರತ ವೀರಶೈವ ಮಹಾ ಪರಿಷತ್ತುಗಳು ಅಧ್ಯಕ್ಷ ಪದವಿಯಿತ್ತು ಗೌರವ ಸಲ್ಲಿಸಿದುದು, ಮಹಾಜನ ರಜತ ಮಹೋತ್ಸವ ಮತ್ತು ಸುವರ್ಣ ಮಹೋತ್ಸವಗಳನ್ನಾಚರಿಸಿ "ಹುಟ್ಟಿದುದಕೆ ಇದುವೆ ಸಾರ್ಥಕ" ಎಂದು ಧನ್ಯತೆಯ ಉಸಿರೆಳೆದುದು- ಇವುಗಳು ಶ್ರೀಗಳ ಬದುಕಿನಲ್ಲಿ ಪ್ರಮುಖ ಹೆಜ್ಜೆಗಳಾಗಿವೆ. ಹೆಚ್ಚೇನು? ಶ್ರೀ ಶ್ರೀಗಳವರ ಸಾಧನೆ ಅನಂತ, ಅದ್ಭುತ ಎಲ್ಲವನ್ನೂ ಹೇಳುವುದೂ ಸಾಧ್ಯವಿಲ್ಲ. ಕೆಲವು ಗೋಚರ, ಹಲವು ಹೃದ್ಗೋಚರ ಆದರೂ ಸಾಧ್ಯವಾದಷ್ಟನ್ನೂ ಗುರುತಿಸಿ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘ "ಸಿದ್ಧಗಂಗಾ ಶ್ರೀ" ಯನ್ನು ಸನ್ನಿಧಿಗೆ ಅರ್ಪಿಸಿದೆ. ಅದರಲ್ಲಿನ ಕೆಲವು ಅಂಶಗಳನ್ನು ಆಯ್ದಿಲ್ಲಿ ಪುಟೀಕರಿಸಲಾಗಿದೆ ಅಷ್ಟೆ.

ಪ್ರಿಯ ಗುರುವೆ,

ವಿದ್ಯಾನಿಧಿ ಪ್ರಭುವೆ, ಶಿವ ಕಲಾಮೃತ ವಿಭುವೆ,
ಸಿದ್ಧಗಂಗಾಸ್ಥಾನ ಸೀಮೆ ಪರಿಮಿತಕಲ್ಲ
ನಿನ್ನ ಪುಣ್ಯ ಜ್ಯೋತಿ ; ನರಜಾತಿಕುಲಕೆಲ್ಲ
ನೀನಾಗಿರುವ ಲಿಂಗ ಆ ಜ್ಯೋತಿ ಬೆಳಗುತಿಹೆ
ನಿತ್ಯ ವೈವಿಧ್ಯದಿಂ ಕಲೆ ಧರ್ಮಶಾಸ್ತ್ರದೊಳ್
ವಿಜ್ಞಾನ ಪ್ರಜ್ಞಾನ ಸಾಮಾನ್ಯ ಜ್ಞಾನದೊಳ್
ಮೇರು ಸದೃಶಂ ನಿನ್ನ ತನುವು ತಪವಸದೃಶ
ಜಪವ ಸಂಖ್ಯಂ ಶೂನ್ಯ ಸಂಪಾದನೆಯೆ ಸಿದ್ಧಿ
ಪೂರ್ಣದಿಂ ಪೂರ್ಣಕೊಯ್ಯುವ ಮಹಾಸಾಹಸಂ
ದೀನದಲಿತೋದ್ಧಾರ ರಚನಾವಿವೇಚನೆಯೆ
ಪ್ರಾಣಲಿಂಗದ ಮಂತ್ರ ಸೂಕ್ಷ್ಮ ಹೃದಯದ ತಂತ್ರ
ಭಾವ ಕಾರಣದ ಮಹದಾನಂದ ನಿನಗೇದು ?
ನಾವೆಲ್ಲ ನಿನ್ನಡಿಯ ಪಾತ್ರತೆಯನರಿತಂದು
ಈ ಸುವರ್ಣೋತ್ಸವವು ಶತಶತದಿ ಬೆಳೆದಂದು

—ಬಸವೇಶ್ವರ ಶಿವಪ್ಪ ತುಪ್ಪದ
('ಸಿದ್ಧಗಂಗಾಶ್ರೀ' ಇಂದ)



# "ಸ್ವರ್ಣ ಮಹೋತ್ಸವ ಸಮೀಕ್ಷೆ"

—ಪಿ. ಎಚ್. ಚಂದ್ರಶೇಖರಯ್ಯ

ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಸುವರ್ಣ ಮಹೋತ್ಸವ ಸಮಾರಂಭ ಒಂದು ಐತಿಹಾಸಿಕ ದಾಖಲೆ. ಅವಿಸ್ಮರಣೀಯ ಸಮಾರಂಭ, ಕಂಡು ತಣಿಯದ ದೃಶ್ಯ, ವರ್ಣಿಸಲು ವರ್ಣನೆಗೆ ನಿಲುಕದ ನಿಲುವು. ಆ ಸಮಾರಂಭದಲ್ಲಿ ಪಾಲ್ಗೊಂಡ ಜನತೆ ಹುಟ್ಟಿದುದಕ್ಕೆ ಇದುವೇ ಸಾರ್ಥಕವೆಂಬ ತೃಪ್ತಿ. ಅಸಂಖ್ಯಾತ ಭಕ್ತ ಜನಸ್ತೋಮ, ಲಕ್ಷಾವಧಿ ಹಿತೈಷಿಗಳು, ಅಗಣಿತ ಅಭಿಮಾನಿಗಳು, ನೂರಾರು ಮಂದಿ ಮಠಾಧಿಪತಿಗಳು, ಸಾವಿರಾರು ಮಂದಿ ಹಳೆಯ ವಿದ್ಯಾರ್ಥಿಗಳು, ತಂಡೋಪತಂಡ ಪ್ರೇಕ್ಷಕ ಬಂಧುಭಗಿನಿಯರು ಕರ್ನಾಟಕ, ಆಂಧ್ರ, ಕೇರಳ, ತಮಿಳುನಾಡು, ಮಹಾರಾಷ್ಟ್ರ ಮುಂತಾದ ನೆರೆ ರಾಜ್ಯಗಳಿಂದ ಸಮಾರಂಭಕ್ಕೆ ಶೋಭೆ ತಂದಿದ್ದರು. ಸಮಾರಂಭದ ಮೂರು ದಿನಗಳು ಮುಗಿದದ್ದೆ ಒಂದು ಪವಾಡ. ದಿನಗಳು ಕ್ಷಣಗಳಾಗಿ ಕಳೆದುವು. ಹರ ಕರುಣೋದಯಕ್ಕೆ ಮಿಗಿಲೆಣೆಯುಂಟೆ, ಶರಣರು ಮೆಟ್ಟಿದ ಧರೆ ಪಾವನ, ಮುಟ್ಟಿದ ಜಲ ತೀರ್ಥ, ನಡೆದ ನೆಲ ಅವಿಮುಕ್ತ ಕ್ಷೇತ್ರ.

ದಿನಾಂಕ 1982 ರ ಏಪ್ರಿಲ್ 24 ಶ್ರೀ ಕ್ಷೇತ್ರದ ಇತಿಹಾಸದಲ್ಲಿಯೇ ಸುವರ್ಣಾಕ್ಷರದಲ್ಲಿ ಬರೆದಿಡುವ ಸುವರ್ಣ ಹಬ್ಬದ ಪ್ರಾರಂಭೋತ್ಸವ... ರಾಷ್ಟ್ರದ ಅತ್ಯುನ್ನತ ಪ್ರಜೆ, ಘನತೆವೆತ್ತ ನೀಲಂ ಸಂಜೀವರೆಡ್ಡಿಯವರ ಆಗಮನಕ್ಕೆ ಸಕಲ ಗೌರವ ಮರ್ಯಾದೆಯ ಸಿದ್ಧತೆಗಳು ಸುಮಾರು ಎರಡು ತಿಂಗಳಿಂದ ಭರದಿಂದ ಸಾಗಿದವು. ಇದಕ್ಕೆ ಪೂರ್ವಭಾವಿಯಾಗಿ ಸುವರ್ಣ ಮಹೋತ್ಸವವನ್ನು ನಡೆಸಬೇಕೆಂದು ತೀರ್ಮಾನಿಸಿಕೊಂಡು 1978 ರಿಂದ ಕಾರ್ಯಕ್ರಮಗಳು ಅವ್ಯಾಹತವಾಗಿ ನಡೆದುಬಂದರೂ ಫೆಬ್ರವರಿ ಅಂತಿಮದಿಂದ ಏಪ್ರಿಲ್‌ವರೆಗಿನ ಕಾರ್ಯಕ್ರಮಗಳು ಮನುಷ್ಯ ಮಾತ್ರದವರು ನಿರ್ವಹಿಸಲು ಅಸದಳವಾದವು. ಸುಮಾರು ನಾಲ್ಕೈದು ವರ್ಷಗಳಿಂದಲೂ ಸುವರ್ಣ ಮಹೋತ್ಸವ ಪ್ರಚಾರ ಕಾರ್ಯ ಎಲ್ಲೆಡೆಯಲ್ಲಿಯೂ ಪ್ರಚಾರದಲ್ಲಿದ್ದಿತು. 1980 ಕ್ಕೆ ಶ್ರೀ ಶ್ರೀಗಳವರ ಪಟ್ಟಾಧಿಕಾರ ಸುವರ್ಣ ಮಹೋತ್ಸವದ 50 ವರ್ಷಗಳ ಪೂರ್ಣಗಡುವು. ಮಳೆಬೆಳೆ ಸಮೃದ್ಧಿಯಾಗಿ ಆಗದ ಪ್ರಯುಕ್ತ ಶ್ರೀ ಶ್ರೀಗಳವರೇ ಮಹೋತ್ಸವವನ್ನು ಅನಿವಾರ್ಯವಾಗಿ ಮುಂದೂಡಿದ್ದರು. ಅಸಂಖ್ಯ ಭಕ್ತಕೋಟಿ ಈ ಚಿನ್ನದ ಹಬ್ಬವನ್ನು ನೋಡಿ ಆನಂದಿಸಬೇಕೆಂಬ ಅತ್ಯಂತ ಸಂಭ್ರಮ ಸಡಗರದಿಂದ ಕಾಯುತ್ತಿದ್ದಿತು. ಏಪ್ರಿಲ್ 24 ರಂದು ಸಮಾರಂಭ ನಡೆಯುವ ದಿನ ಘೋಷಣೆಯಾದಂದು ಜನತೆಯ ಉತ್ಸಾ

ಹಕ್ಕೆ ಮಿತಿಯಿಲ್ಲದಾಯಿತು. ಭಕ್ತಸಮೂದಾಯದ ತನುಮನದಲ್ಲಿ ವಿದ್ಯುತ್ ಸಂಚಾರವಾಗತೊಡಗಿತು. ನನ್ನ ಅಳಿಲು ಸೇವೆಯನ್ನು ತೀರಿಸಿ ಕೃತಕೃತ್ಯವಾಗುವ ಸಂದರ್ಭ ಒದಗಿತು ಎಂದು ಹರ್ಷತುಂದಿಲರಾದರು. ಧನ-ಧಾನ್ಯ ಸಂಗ್ರಹಣೆ ಅತಿ ಚುರುಕಿನಿಂದ ನಡೆಯಿತು. ಎಲ್ಲೆಡೆಯಲ್ಲಿಯೂ ಅತ್ಯಂತ ಉತ್ಸಾಹದ ಸ್ವಾಗತ. ಶ್ರೀಗಳವರ ಜಾತ್ಯಾತೀತ ಭಾವನೆ ಜನಮನದಲ್ಲಿ ಬೇರೂರಿದ್ದು ಪ್ರತ್ಯಕ್ಷ ದರ್ಶಿಗಳಿಗೊಂದು ಸಂತಸದ ಸುದ್ದಿ. ಬಡವ ಬಲ್ಲಿದರೆನ್ನದ ಸರ್ವರಿಂದಲೂ ಸಮಾನ ಭಾವನೆ ಶ್ರೀಗಳವರು 50 ವರ್ಷಗಳಿಂದ ಸಲ್ಲಿಸಿದ ಸಮಾಜ ಸೇವೆಯ ಸಾಕ್ಷಾತ್ ದರ್ಶನದ ವಿರಾಟ್‌ರೂಪ. ತುಂಬು ಹೃದಯದ ಅಕ್ಕರೆಯ ಆಹ್ವಾನ, ಸತ್ಕಾರ್ಯಕ್ಕಾಗಿ ಮುಡುಪುಗೈದ ಸದ್ಭಾವನೆ ಎಲ್ಲೆಡೆಯ ಅನುಭವ. ಸಮಾರಂಭವನ್ನು ಕಣ್ಣಾರೆ ಕಂಡು ಧನ್ಯರಾಗಬೇಕೆಂಬ ಹಂಬಲ. ಈ ಸದಭಿಲಾಷೆಯ ಈಡೇರಿಕೆಗಾಗಿ ಭಗವಂತನಲ್ಲಿ ಪ್ರಾರ್ಥನೆ ಸಲ್ಲಿಸುವ ಮುಗ್ಧ ಜನತೆಯ ಭಾವೋನ್ಮಾದವನ್ನು ಕಂಡಾಗ ಶ್ರೀಗಳವರ ಅಗಾಧ ಕಾರ್ಯಬಾಹುಳ್ಯ ಜನಮನದಲ್ಲಿ ಬೇರೂರಿದ್ದನ್ನು ನೋಡಿ ಮನದಲ್ಲಿಯೇ ಹರ್ಷ ಉಕ್ಕಿಹರಿಯಿತು. 12 ನೆಯ ಶತಮಾನದಲ್ಲಿ ಭಗವಾನ್ ಬಸವಣ್ಣನವರ ಜನಕಲ್ಯಾಣದ ಸಮೃದ್ಧಿಯನ್ನು ಕಂಡುಂಡ ಜನ ಹಾಡಿ ತಣಿದದ್ದೂ ಉಂಟು. ಆ ಸನ್ನಿವೇಶವನ್ನು ಪುನಃಸ್ಮರಣೆ ತಂದಿತು. ಗ್ರಾಮಾಂತರ ಮುಗ್ಧ ಜನತೆಯನ್ನು ಕಂಡಾಗ ಶ್ರೀ ಶ್ರೀಗಳವರ ಸರಿಸಾಟಿಯಿಲ್ಲದ ಜನಕಲ್ಯಾಣ ಕ್ರಾಂತಿ ಅಚಿಂತ್ಯ, ಅತ್ಯದ್ಭುತ. ಅಂದು ಮಹಾ ದಾಸೋಹಿ ಬಸವಣ್ಣ, ಇಂದು ತ್ರಿವಿಧ ದಾಸೋಹಿ ಶ್ರೀ ಶ್ರೀ ಸನ್ನಿಧಿಯವರೆಂದಿತು ಜನತೆ. ಬಸವಣ್ಣ, ಪ್ರಭುದೇವರು, ಸಿದ್ಧರಾಮನನ್ನು ನೋಡದ ನಮಗೆ ಮೂವರು ಮಹಿಮಾನ್ವಿತರು ಏಕತ್ರ ಮೂರ್ತೀಭವಿಸಿದ ಸಂಗಮ ಮೂರ್ತಿ ಶ್ರೀ ಉದ್ದಾನ ಶಿವಯೋಗಿಗಳಿಂದ ಕಡೆಯಲ್ಪಟ್ಟ ಥಳಥಳ ಹೊಳೆಯುವ ಸುಂದರ ಚೇತನ ಮೂರ್ತಿ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳು.

ಈ ಸುವರ್ಣ ಸಮಾರಂಭಕ್ಕಾಗಿ ಬರುವ ಸಂಖ್ಯೆ ನಿರೀಕ್ಷೆಗೆ ನಿಲುಕದಾಯಿತು. ಅಂದಾಜು ಎಂಟೆಂತ್ತು ಲಕ್ಷಮಂದಿಯಾದರೂ ಬರಬಹುದೆಂಬ ನಿರೀಕ್ಷೆ. ಬರುವ ಜನಸಮೂಹಕ್ಕೆಲ್ಲಾ ನಿಂತು ವಸತಿ, ದಾಸೋಹ ವ್ಯವಸ್ಥೆ ಮತ್ತು ಬಹುಜನಸ್ತೋಮ ನೆರೆದಾಗ ಹದಗೆಡುವ ವಾತಾವರಣ ಸ್ವೈರ್ಮಲ್ಯದ ವ್ಯವಸ್ಥೆಗಳು ಗುರುತರವಾದವು. ಶ್ರೀ ಕ್ಷೇತ್ರದಲ್ಲಿ ಪ್ರತಿ ವರ್ಷವೂ ಶಿವರಾತ್ರಿ ಸಂದರ್ಭದಲ್ಲಿ ನಡೆಯುವ ಮಹತ್ವಪೂರ್ಣ ಜಾತ್ರೆಗೆ ವರ್ಷಂಪ್ರತಿ ಅನೇಕ ಹೊಸ ಏರ್ಪಾಡುಗಳು ನಡೆಯುತ್ತಿದ್ದರೂ ಸಮಾರಂಭಕ್ಕಾಗಿ ವಿಶೇಷ ನೀರಿನ ವ್ಯವಸ್ಥೆ ಮಾಡಿಸಿದ್ದರು ಶ್ರೀ ಶ್ರೀಗಳವರು. ನಾಲ್ಕು ಕಡೆ ಕೊಳವೆ ಬಾವಿಗಳು ಹತ್ತಾರು ಕಡೆ ನಲ್ಲಿಗಳು, ಶೌಚಕ್ಕಾಗಿ ಶ್ರೀ ಕ್ಷೇತ್ರದ ಒಳಗೆ ಹೊರಗೆ ಅನೇಕ ರೀತಿ ವಿಶೇಷ ವ್ಯವಸ್ಥೆ ಮಾಡಲಾಗಿದ್ದಿತು. ವಾತಾವರಣದ ಶುಚಿತ್ವಕ್ಕಾಗಿ ವಿಶೇಷ ಸಿದ್ಧತೆಗಳು ನಡೆದವು. ಅವಧಿಯ ಪ್ರಕಾರ ಶ್ರೀ ಕ್ಷೇತ್ರದ ವಿದ್ಯಾರ್ಥಿ



ಗಳು ಮತ್ತು ಹಳೆಯ ವಿದ್ಯಾರ್ಥಿ ಮಿತ್ರರು ವಿಶೇಷ ಆಸ್ಥೆ ವಹಿಸಿ ಹಗಲುರಾತ್ರಿಯೆನ್ನದೆ ಜಾಗರೂಕತೆಯಿಂದ ಶುಚಿತ್ವ ಕಾಪಾಡಲು ಶ್ರಮಿಸಿದರು.

ಸಮಾರಂಭಕ್ಕೆ ಬರುವ ಜನಸ್ತೋಮ ಅಸಂಖ್ಯವಾದುದುದೆಂಬ ನಿರೀಕ್ಷೆ. ದಿನವಿಡೀ ನಡೆಯುವ ಕಾರ್ಯಕ್ರಮಗಳ ಯೋಜನೆ. ಭಕ್ತಸ್ತೋಮಕ್ಕೆ ಬೇಸರಿಕೆ ತರಬಾರದೆಂಬ ಮಹತ್ವಾಕಾಂಕ್ಷೆ. ಸಮಾರಂಭ ನಡೆಯುವ ಮೂರು ದಿನಗಳು ಬಂದು ನೆಲಸಿದ ಮಂದಿ ಮೂರು ದಿನಗಳು ಕಳೆದು ಮನೆಗೆ ಮರಳುವಾಗ ವಿಶೇಷ ಮನೋಪರಿವರ್ತನೆ ಉಳ್ಳವರಾಗಬೇಕು. ನಡೆನುಡಿ ಭಾವನೆಗಳ ಹೊಸತನ ಮೂಡಿ ಹಿಂದುರುಗಬೇಕು. ಒಂದು ಹೊಸ ವಾತಾವರಣ, ಹೊಸ ಜಗತ್ತನ್ನು ಪ್ರವೇಶಿಸಿ ಮರಳಿದಂತಿರಬೇಕು. ಜನ ಘಂಟೆಗಟ್ಟಲೆ ಕುಳಿತು ಕೇಳಬೇಕು, ಮನಸಾರೆ ಅಪ್ಪಬೇಕು, ಮನಸ್ಸು ಪರಿಪಕ್ವವಾಗಿ ಹದಗೊಳ್ಳಬೇಕು, ಕೇಳುವ ಜನಕ್ಕೆ ಮನದಣಿಯದ ಕಾರ್ಯಕ್ರಮ ಯೋಜನೆ ಪೂಜ್ಯರದು.

ಬೃಹತ್ ಸಮಾರಂಭಕ್ಕಾಗಿ ಆಗಮಿಸುವ ಬೃಹತ್ ಜನಸ್ತೋಮಕ್ಕೆ ಒಮ್ಮೆಲೆ ಕುಳಿತು ನೋಡುವ ವ್ಯವಸ್ಥೆ ಮಾಡಬೇಕೆಂಬ ಅಭಿಲಾಷೆ ಶ್ರೀಗಳವರದ್ದು. ಸುಮಾರು ಎರಡು ತಿಂಗಳಿಂದಲೂ ಸಮಾರಂಭ ನಡೆಯುವ ವೇದಿಕೆ, ಆದಕ್ಕೆ ಹೊಂದಿಕೆಯಾಗುವ ಸೂಕ್ತ ಸ್ಥಳದ ಆಯ್ಕೆ ಈ ಬಗ್ಗೆ ಶ್ರೀಗಳವರು ತಜ್ಞರನ್ನು ಕರೆದು ವಿಚಾರ ಚಿಂತನ. ಯೋಜನೆ ಕೇಳಿದವರಿಗೆ ದಂಗುಬಡಿಸುತ್ತಿತ್ತು, ಎಲ್ಲರೂ ನೆರಳಲ್ಲಿ ಕುಳಿತು ಸಮಾರಂಭದಲ್ಲಿ ಭಾಗಿಗಳಾಗಬೇಕು. ಸಮಾರಂಭ ಶ್ರೀ ಕ್ಷೇತ್ರದ ಆವರಣದಲ್ಲಿಯೇ ವ್ಯವಸ್ಥಿತವಾಗಬೇಕು. ಅಧಿಕ ಜನ ಸಂದಣಿಯ ನೆರವಿಗೆ ಅನುವಾಗಬೇಕು. ಮುಂಜಾಗ್ರತೆಯಾಗಿ ಒಂದು ತಿಂಗಳಿಂದಲೇ ಸಮಾರಂಭದ ಭವ್ಯ ಸಭಾಂಗಣದ ನಿರ್ಮಾಣ ಕಾರ್ಯದ ಆರಂಭ. ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾ ಪಾಠಶಾಲೆಯ ಆವರಣ ಅದಕ್ಕೆ ಸೂಕ್ತ ಸ್ಥಳ ಮತ್ತು ಸಹಕಾರ ಸಂಘದ ಮುಂದೆ ವೇದಿಕೆ ನಿರ್ಮಾಣಕ್ಕೆ ತೀರ್ಮಾನವಾಯಿತು. ನೆರಳಿನ ವ್ಯವಸ್ಥೆಗಾಗಿ ಚಪ್ಪರವೇ ? ಸ್ಯಾಮಿಯಾನ ಹಾಕಿಸುವುದೇ ? ಬೇರೆ ಯಾರಾವರಿಂದ ಪೂರ್ಣ ಒಪ್ಪಿಗೆ ಕೊಟ್ಟರಾಯಿತೆ? ಇಡೀ ಶ್ರೀ ಕ್ಷೇತ್ರದ ಆವರಣವನ್ನು ಹಸಿರು ಚಪ್ಪರದಿಂದಲೇ ಅಲಂಕರಿಸಬೇಕೇ ? ಇತ್ಯಾದಿ ಚಿಂತನೆ. ಮಂಗಳ ಮಹೋತ್ಸವಕ್ಕೆ ಶುಭಸೂಚಕವಾದ ತಳಿರುತೋರಣದಿಂದಲಂಕೃತ ಹಸಿರು ಚಪ್ಪರವೇ ಸೂಕ್ತವೆಂಬ ಶ್ರೀ ಶ್ರೀಗಳವರು ಸಮಯಾಭಾವದ ಕಾರಣ ಸಭಾಂಗಣಕ್ಕೆ ಆಧುನಿಕ ರೀತಿಯ ವ್ಯವಸ್ಥಿತ ಭವ್ಯ ಸಭಾಂಗಣದ ನಿರ್ಮಾಣಕ್ಕೆಂದು ಬೆಂಗಳೂರಿನ ಒಬ್ಬ ಮಾಲೀಕರಿಗೆ ಪೂರ್ಣ ಒಪ್ಪಿಸಲಾಯಿತು. ಸಭಾಂಗಣದ ನಿರ್ಮಾಣ ಕಾರ್ಯ ಹಂತಹಂತವಾಗಿ ನಿರ್ಮಾಣಗೊಂಡಿತು. ವೇದಿಕೆಯ ಮಾಟ ಎತ್ತರ, ಉದ್ದ ಎಲ್ಲವೂ ವ್ಯವಸ್ಥಿತ ರೂಪದಲ್ಲಿತ್ತು. ಮಾನ್ಯ ರಾಷ್ಟ್ರಪತಿ ಭವನದ ಆದೇಶಕ್ಕೆ ಅನುಗುಣವಾಗಿ ನಿರ್ಮಾಣವಾ

ಯಿತು. ಸುಮಾರು 180-200 ಮಂದಿ ವೇದಿಕೆಯನ್ನಲಂಕರಿಸುವ ಸುಸಜ್ಜಿತ ವ್ಯವಸ್ಥೆ. 15, 20 ಸಹಸ್ರ ರೂಗಳವರೆಗೂ ನಿರ್ಮಾಣ ಕಾರ್ಯಕ್ಕೆ ವ್ಯಯಿಸಿದ ಖರ್ಚು. ಇಡೀ ಸಭಾಮಂಟಪ ಶ್ವೇತ ವಸ್ತ್ರಾಲಂಕಾರದಿಂದ ಆಚ್ಛಾದಿತವಾಗಿತ್ತು, ರಕ್ತ ವರ್ಣಾಲಂಕೃತ ವಸ್ತ್ರ ಪಟ್ಟಿಯಿಂದ ಕೂಡಿದ ಶ್ವೇತ ವಸ್ತ್ರದ ಹೊದಿಕೆ ಶುಭ್ರ ಶ್ವೇತವಸ್ತ್ರಾಲಂಕೃತ ರಜತಗಿರಿಯ ಶಿವ ಸಭಾಂಗಣದಂತೆ ಶೋಭಿಸಿತ್ತು. ಹೊಂದಿಕೊಳ್ಳುವ ವಿದ್ಯುದ್ದೀಪದ ಅಲಂಕರಣ, ಮತ್ತಷ್ಟು ಮೆರಗು ಕೊಟ್ಟಿತ್ತು. ಶರಣರ ವಚನಮಯ ಸಭಾಂಗಣ ಶಿವಯೋಗಿ ಉದ್ಧಾನೇಶ್ವರ ಮಂಟಪದ ಅನ್ವರ್ಥ ನಾಮಕ್ಕೆ ಹೊಂದಿಕೊಂಡು ಜ್ಞಾನ ದೀವಿಗೆಯನ್ನು ಬೆಳಗುವಂತೆ ಕಂಗೊಳಿಸಿತ್ತು. ಜ್ಞಾನಾನುಭವ ನೀಡುವ ಬಯಲ ಸುಂದರ ವರ್ಣಮಯ ಶಿವಾನುಭವ ಮಂಟಪದಂತೆ ಶೋಭಾಯಮಾನವಾಗಿತ್ತು.

ಮಂಗಳ ಕಾರ್ಯಕ್ಕೆ ಹಸಿರು ಚಪ್ಪರ ಅತ್ಯಂತ ಶುಭಸೂಚಕ. ಮಠದ ಆವರಣವನ್ನು ಹಸಿರು ಚಪ್ಪರದಿಂದ ಅಲಂಕಾರಗೊಳಿಸಬೇಕೆಂಬುದು ಶ್ರೀಗಳವರ ಸಂಕಲ್ಪ. ಆ ಸಂಕಲ್ಪ ಶಕ್ತಿಗೆ ಎಳ್ಳಷ್ಟು ಚ್ಯುತಿಯಿಲ್ಲ. ಶ್ರೀಗಳವರ ಆದೇಶದಂತೆ, ಶ್ರೀ ಕ್ಷೇತ್ರದ ವಿದ್ಯಾರ್ಥಿಗಳೇ ಸಭಾಂಗಣದ ಚಪ್ಪರಕ್ಕೆ ಹೊಂದಿಕೊಂಡು ಮಠದ ಮುಂದಿನವರೆವಿಗೂ ಚಪ್ಪರ ನೆಡಲು ಆರಂಭ. ಹಗಲು ರಾತ್ರಿಯೆನ್ನದೆ, ಆಯಾಸವನ್ನು ಮುಂದುಮಾಡದೆ ಪ್ರಾರಂಭಿಸಿದರು. ಭಕ್ತಾದಿಗಳಿಂದ ಚಪ್ಪರಕ್ಕೆ ಬೇಕಾಗುವ ಸಾಮಗ್ರಿಗಳು ಕೆಲವೇ ದಿನದಲ್ಲಿ ಬೆಟ್ಟದಷ್ಟು ಬಂದು ಬಿದ್ದುವು. ಸೇವೆಗೆ ಅವಕಾಶ ಸಿಕ್ಕಿದ್ದೇ ಪುಣ್ಯವೆಂಬುದು ಗ್ರಾಮಾಂತರ ಬಂಧುಗಳ ಆಶಯ. ಶ್ರೀಗಳವರ ಅಪ್ಪಣೆ ಅವರಿಗೆ ಒಂದು ಶುಭಾಶೀರ್ವಾದ. ದಣಿವು ಆಯಾಸಗಳನ್ನು ಲೆಕ್ಕಿಸದೆ, ತಂದು ವ್ಯವಸ್ಥೆಗೊಳಿಸಿದರು. ಏಪ್ರಿಲ್ 23 ನೆಯ ತಾರೀಖು ಬೆಳಗ್ಗೆ ಆ ವಿಶಾಲ ಚಪ್ಪರಕ್ಕಾಗಿ ಒಂದು ಹಸಿರು ಗರಿಯೂ ಬಂದಿರಲಿಲ್ಲ. ಸಂಜೆ ಆಗುತ್ತಾ ಎಲ್ಲಿತ್ತೋ ಏನೊ ಮಾವಿನಸೊಪ್ಪು, ತೆಂಗಿನ ಗರಿಗಳು, ಬಾಳೆಯ ಕಂಬಗಳು ರಾಶಿರಾಶಿ ಬಂದು ಸೇರಿತು. ಬೆಳಗಾದರೆ ಮಹೋತ್ಸವ ಕಾರ್ಯಗಳ ಸಿದ್ಧತೆಗೆ ತೊಡಗಬೇಕು, ಶ್ರೀಮಠದ ಆವರಣ ಜನಮಯವಾಯಿತು. ಏಪ್ರಿಲ್ 23 ರ ಇಡೀ ರಾತ್ರಿ ರಾಶಿರಾಶಿಯಾಗಿ ಬಿದ್ದಿದ್ದ ಮಾವಿನ ಸೊಪ್ಪು, ತೆಂಗಿನ ಗರಿ ಎಲ್ಲವೂ ಅಲಂಕರಣಗೊಂಡು ಶ್ರೀಕ್ಷೇತ್ರದ ಆವರಣ ಹಸಿರು ಚೆಲ್ಲುವ ವನಶ್ರೀಯ ಕಾಂತಿಯಿಂದ ನೋಡುವವರ ಕಣ್ಣಿಗೊಂದು ಹಬ್ಬ. ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು ಚಪ್ಪರವನ್ನು ಅಲಂಕರಿಸಿ ಮುಂಗೋಳಿ ಕೂಗುವ ಹೊತ್ತಿಗೆ ಇಡೀ ಅಂಗಳವೆಲ್ಲವನ್ನೂ ಶುಚಿಗೊಳಿಸಿದ್ದರು. ಶ್ರೀ ಕ್ಷೇತ್ರದ ಕಾರ್ಯಕಲಾಪವನ್ನು ನೋಡುವ ಕುತೂಹಲದಿಂದ ಆ ಹೊತ್ತಿಗಾಗಲೇ ಬಂದಿದ್ದ ಭಕ್ತ ಜನಸ್ತೋಮಕ್ಕೆ ಎಲ್ಲವೂ ಅಚ್ಚರಿ, ಆನಂದ, ಸಂತಸ.

ಮೋಟಾರು ಎಣ್ಣೆಯ ಅಭಾವದಿಂದ ಬಸ್ಸಂಚಾರ ಸಾಕಷ್ಟು ಇಲ್ಲದಿದ್ದರೂ ಸಕಾಲಕ್ಕೆ ಹೇಗೆ ತಲುಪಬೇಕೆಂಬ ಬಯಕೆಯಿಂದ ಹತ್ತಾರು ಮೈಲಿಗಳಿಂದ ಕಾಲುನಡಿಗೆಯಲ್ಲಿಯೇ



ಭಕ್ತಜನ ಸಂದಣಿ ಶ್ರೀ ಕ್ಷೇತ್ರದ ಸುತ್ತಮುತ್ತಲ ದಾರಿಯುದ್ದಕ್ಕೂ ಸಾಲುಗಟ್ಟಿದ ಜನ ಹೊತ್ತ ದಾರಿ ನೋಯಿಸದೆ ನೆರವಾಯಿತು. ಎಷ್ಟು ಹೊತ್ತಿಗೆ ಬಂದು ಸೇರುವೆವೆಂಬ ಕಾತರ ಮಾರ್ಗಾಯಾಸಕ್ಕೆ ಅವಕಾಶ ಕೊಡಲಿಲ್ಲ. ಇಡೀ ರಾತ್ರಿಯೆಲ್ಲಾ ಭಕ್ತಕೋಟಿಯ ಆಗಮನ, ಏಪ್ರಿಲ್ 23 ರ ಇಡೀ ದಿನ ಶ್ರೀ ಕ್ಷೇತ್ರದಲ್ಲಿ ಹಗಲೇ ಆವರಿಸಿತ್ತು. ರಾತ್ರಿ ನಿದ್ರಾದೇವಿಯು ತನ್ನ ಕಾರ್ಯವನ್ನು ಮರೆತು ಶ್ರೀ ಕ್ಷೇತ್ರದ ಸೊಬಗು ಸೌಂದರ್ಯ ನೋಡುತ್ತಾ ಕುಳಿತಳು ಕರ್ತವ್ಯಚ್ಯುತೆಯಾಗಿ.

ಏಪ್ರಿಲ್ 24 ರ ಬ್ರಹ್ಮ ಮುಹೂರ್ತ ನಿಜಕ್ಕೂ ಭಕ್ತಭಾವುಕರ ಭಾಗ್ಯದ ಮುಹೂರ್ತ. ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ನಿತ್ಯ ರುದ್ರಾಭಿಷೇಕದ ಆ ಮಂಗಳಮಯ ವೇದಘೋಷದ ನಿನಾದ ಜನಮನದಲ್ಲಿ ಸ್ವರ್ಗೀಯ ಸನ್ನಿವೇಶವನ್ನು ಮೂಡಿಸಿತ್ತು. ಅಸಂಖ್ಯ ಭಕ್ತರ ಭಾವದ ಭಾಗ್ಯೋದಯ ಅಂದಿನ ಅರುಣೋದಯ. ಎಲ್ಲರ ನಿರೀಕ್ಷೆಗೆಂದೇ ಉದಯವಾಯಿತು. ಕಾರಣ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರನ್ನು ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯವರ ಸನ್ನಿಧಿಯಿಂದ ಉತ್ತರ ಪೂರ್ವಕವಾಗಿ ಸಭಾಂಗಣಕ್ಕೆ ಕರೆತರುವ ದೃಶ್ಯ, ಅದನ್ನು ಕಣ್ಣಾರೆಕಂಡು ಆನಂದಿಸಬೇಕೆಂದು ಇಡೀ ರಾತ್ರಿಯೆಲ್ಲಾ ನಿಮಿಷವಾಗಿ ಕಳೆದು ಕಾದುಕುಳಿತ ಜನಸಂದಣಿಯ ಆನಂದಕ್ಕೆ ಪಾರವೇ ಇಲ್ಲ. ಮಾತು ಮೂಕವಾಗುವ ದೃಶ್ಯ, 52 ವರ್ಷಗಳು ಇಡೀ ಜೀವವನ್ನೇ ಸಮಾಜಕ್ಕಾಗಿ ಜನಮನದ ಜಾಗೃತಿಯ ಮಹಾ ಪುಣ್ಯಕ್ಕಾಗಿ ಅರ್ಪಿಸಿದ ಹಣ್ಣಾದ ಈ ಪುಣ್ಯಮೂರ್ತಿಯ ಮಂಗಳ ಉತ್ಸವವನ್ನು ಕಂಡು ಕೃತಾರ್ಥವಾಗುವ ದೃಶ್ಯ ವರ್ಣನೆಗೆ ನಿಲುಕದ್ದು.

ಸಾರ್ಥಕ ಜೀವಿಗಳನ್ನು ಗೌರವಿಸುವುದರಲ್ಲಿ ಸಾಫಲ್ಯವಡಗಿದೆ. ಐದು ದಶಕಗಳಿಗೂ ಮಿಕ್ಕು ಎಲ್ಲ ನನ್ನವರೆನ್ನುವ ಭಾವನೆಯ ಕಣ್ತೆರಸಿದ, ಸದ್ದುಗದ್ದಲವಿಲ್ಲದ ಈ ಜೀವಿಯ ಸಾಧನೆಯ ಕುರುಹಾಗಿ 50 ಮಂದಿ ಸುಮಂಗಲಿಯರು ಆರತಿ ಮತ್ತು ಕಳಸಗಳನ್ನೊತ್ತಿದ್ದರು. 50 ಮಂದಿ ಮುತ್ತೈದೆಯರು ಪೂರ್ಣಕುಂಭದ ಭಾರ ಮರೆತು ಸ್ವಾಗತೋತ್ಸವದಲ್ಲಿ ಪಾಲ್ಗೊಂಡಿದ್ದರು. ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಬೆಟ್ಟದ ಇಡೀ ಸೋಪಾನ ಪಂಕ್ತಿಗಳೆಲ್ಲವು ವರ್ಣರಂಜಿತ ವಸ್ತ್ರಾಲಂಕಾರಗಳಿಂದ ಅಲಂಕೃತಗೊಂಡು ಶ್ರೀ ಶ್ರೀಗಳವರನ್ನು ಕರೆತರುವ ಭಾರಹೊತ್ತು ಧನ್ಯತೆಯನ್ನು ಪಡೆದಿದ್ದವು. ಛತ್ರಿ ಚಾಮರ ಮಂಗಳವಾದ್ಯಸಂದೀ ಧ್ವಜನರ್ತನ ಇಡೀ ವಾತಾವರಣವನ್ನೇ ಮಂಗಳಮಯವಾಗಿದ್ದಿರಿಸಿದ್ದಿತು. ಉಷಃಕಾಲ ಅವಿಸ್ಮರಣೀಯವಾದುದು, ಆ ಜಯಘೋಷ, ಶಿವನ ದಿವ್ಯ ನಾಮಸ್ಮರಣೆ ಎಲ್ಲರ ಹೃದಯ ಮಂದಿರದಲ್ಲಿ ಅರಿವಿಲ್ಲದ ಅಚ್ಚಳಿಯದ ಅಚ್ಚರಿಯನ್ನುಂಟು ಮಾಡುವ ದೈವೀಭಾವನೆಯನ್ನು ಬೇರೂರಿಸಿತು. ಜನ್ಮಜನ್ಮಾಂತರದ ಪುಣ್ಯದಫಲ ಈ ಮಂಗಳ ಕಾರ್ಯದಲ್ಲಿ ಪಾಲ್ಗೊಳ್ಳುವ ಭಾಗ್ಯ ಎನ್ನುವುದು ಅಲ್ಲಿ

ನೆರೆದಿದ್ದವರ ಭಾವನೆ. ಅಷ್ಟು ಸಂತೃಪ್ತಿಯನ್ನು ತಂದಿತ್ತು ಶ್ರೀಗಳವರ ಸ್ವಾಗತೋತ್ಸವ. ಭಕ್ತಿಯ ಭಾವಕ್ಕೆ ಮಣಿಯದವರಾರು? ಉತ್ಸವ ಸಮಾರಂಭಕ್ಕೆ ಶ್ರೀ ಶ್ರೀಗಳವರಿಗೂ ಉತ್ತರ ದಕ್ಷಿಣ ಧೃವದಷ್ಟು ಅಂತರ. ಕಾಲ್ನಡಿಗೆಯಲ್ಲಿಯೇ ಹೋಗೋಣವೆನ್ನುವುದು ಶ್ರೀಗಳವರ ಅಭೀಷ್ಟ. ಜನಮನದ ಆಳವರಿತ ಶ್ರೀಗಳವರು ಪಲ್ಲಕ್ಕಿ ಏರಿಬಂದ ದೃಶ್ಯ ಪಂತೂ ಆನಂದ ಹರ್ಷೋದ್ಗಾರಗಳಿಂದ ಕಂಗೊಳಿಸ ದೃಶ್ಯ. ಅದೆಷ್ಟು ಮಂದಿ ಆನಂದಭಾಷ್ಪ ಪೂರಿತರಾದರೊ, ರೋಮಾಂಚಗೊಂಡರೋ ಹೇಳತೀರದು. ಹೃದಯ ತುಂಬಿದ ಸನ್ನಿವೇಶ, ನೆರೆದಿದ್ದವರ ಜಯಕಾರ, ಶ್ರೀಕ್ಷೇತ್ರ ಗುರುಪರಂಪರೆಯ ಸೇವೆಯ ಪ್ರಶಂಸೆ, ಸರ್ವಜನೋಪಕಾರ ಕ್ರಿಯೆಯ ಸಂತೃಪ್ತಿ. ಸಕಲರಿಗೂ ಲೇಸನ್ನೇ ಬಯಸುವ ಹಿತಚಿಂತನೆ. ಸಮಾಜಸೇವೆಗೆ ಜೀವಿಗಳ ಸೇವೆ ಮುಡಿಪುಗೈದ ಸಂಕೀರ್ತನೆ ಆ ಹೃದಯ ಸ್ಪರ್ಶಿ ದೃಶ್ಯ ಈ ಭಾವನೆಗಳನ್ನು ಮೂಡಿಸಿದ್ದರೆ ಅತಿಶಯೋಕ್ತಿ ಏನಲ್ಲ. ಅದೊಂದು ಹೃದಯ ತುಂಬಿದ ಭಾವಪೂರ್ಣ ಸನ್ನಿವೇಶ.

ಸಮಾರಂಭಕ್ಕೆ ಭಕ್ತಾದಿಗಳನ್ನು ಆಮಂತ್ರಿಸಲು ಸಕಲ ಸಿದ್ಧತೆಗಳು ಸಜ್ಜಾಗಿದ್ದವು. ವಿವಿಧ ಮಾದರಿ ಲಕ್ಷಾವಧಿಕವಾದ ಆಮಂತ್ರಣ ಪತ್ರಿಕೆ, ಮನವಿ ಪತ್ರಿಕೆಗಳು, ವಿವಿಧ ಮಾದರಿ ಭಿತ್ತಿಪತ್ರಗಳು, ವಿವಿಧ ಮಾದರಿಯ ನಾಮಫಲಕ. ಶ್ರೀ ಕ್ಷೇತ್ರದ ಅಪಾರ ಅಭಿಮಾನಿಗಳು ಹಳೆಯ ವಿದ್ಯಾರ್ಥಿ ಮಿತ್ರರಿಂದ ವಿತರಣಾ ಕಾರ್ಯ ಭರದಿಂದ ಸಾಗಿದ್ದಿತು. ತತ್ಪರಿಣಾಮವಾಗಿ ಏಪ್ರಿಲ್ 23 ರ ರಾತ್ರಿಯೇ ಶ್ರೀ ಕ್ಷೇತ್ರದಲ್ಲಿ ಜನಸಂದಣಿ ಪಟ್ಟೈಸಿತ್ತು. ಹಿಂದಿನ ಮೂರುನಾಲ್ಕು ದಿವಸಗಳು ಪ್ರಕೃತಿ ಪ್ರಶಾಂತ ವಾತಾವರಣ ಹಿತಕರವಾಗಿತ್ತು. ಮೋಡಕವಿದ ವಾತಾವರಣ ಕೆಲಸಕಾರ್ಯಗಳ ನೆರಳಿಂದ ತಂಪನ್ನು ಉಂಟುಮಾಡಿತ್ತಾದರೂ, ಎಲ್ಲರಿಗೂ ಭಯದ ವಾತಾವರಣ. ಮೊದಲೇ ಮಳೆ ಬಂದು ಸಮಾರಂಭದಲ್ಲಿ ಬಿಡುವು ಮಾಡಿಕೊಡಲಿ ಎಂಬುದು ಎಲ್ಲರ ಕಾತರ. ಎಲ್ಲರ ಗಮನವೂ ಮುಗಿಲ ಕಡೆ. ಏಪ್ರಿಲ್ 23 ರ ರಾತ್ರಿಯಂತೂ 11 ಘಂಟೆಗೆ ವಿಪರೀತ ಬಿರುಗಾಳಿ, ಗುಡುಗು, ಮಿಂಚಿನಿಂದ ಕೂಡಿದ ಮಳೆಯ ವಾತಾವರಣ. ಮಳೆ ಹನಿಯು ಬೀಳಲು ಪ್ರಾರಂಭ, ಬಿರುಗಾಳಿಯ ಹೊಡೆತಬಡಿತಕ್ಕೆ ಭವ್ಯ ಸಭಾಂಗಣದ ಅಸ್ತವ್ಯಸ್ತತೆಯ ಭಯ. ಸುಮಾರು ಅರ್ಧ ಘಂಟೆಯ ಸಮಯ ಈ ವಿಧವಾದ ಪ್ರಕೃತಿಯ ಆರ್ಭಟ ತಲ್ಲಣಗೊಳಿಸಿತು. ಆದರೆ ಅನಂತರ ಪ್ರಶಾಂತ ವಾತಾವರಣ ಬಹುಶಃ ಸಾತ್ವಿಕ ಚೇತನ ಶಕ್ತಿಯ ಮುಂದೆ ಅಚೇತನ ನೈಸರ್ಗಿಕ ಶಕ್ತಿಯು ಮಣಿದು ಶರಣಾದ ಸನ್ನಿವೇಶ. ಅಘಟನ ಘಟನಾ ಸಾಮರ್ಥ್ಯವ ಮುಹಿಮಾಸ್ವಿತರ ತಪಸ್ಸಿಗೆ ಉಂಟಾಗಿರಲು ಸಾಧ್ಯ. ಅನಂತರ ಮೂರು ದಿವಸಗಳು ಯಶಸ್ವಿಯಾಗಿ ಸಮಾರಂಭದ ಕಾರ್ಯಕ್ರಮಗಳು ನಡೆಯಲು ಸಹಕಾರಿಯಾಯಿತು. ಅಹೋ ತಪಸಾಂ ಪ್ರಭಾವಃ ! ತಪಸ್ವಿಗಳ ಪ್ರಭಾವ ಅತ್ಯಾಶ್ಚರ್ಯಕರವಾದುದಲ್ಲವೇ. ಅಚೇತನ ಜಗತ್ತಿನ ಸವರ್ತನೆಯೇ ಹಾಗಾದರೆ ಇನ್ನು ಚೇತನ ಜಗತ್ತಿನ ವಿಚಾರದ ವರ್ಣನೆ ಅನಗತ್ಯ.



ಶ್ರೀ ಕ್ಷೇತ್ರದ ವಾತಾವರಣವೆಲ್ಲವೂ ರಮ್ಯೋಜ್ವಲ ದೃಶ್ಯ, ವರ್ಣನೆಗಳ ವಿವಿಧಭಂಗಿಯ ಕಟ್ಟಡಗಳು, ವಿದ್ಯುದ್ದೀಪಗಳ ವರ್ಣಾಲಂಕೃತ ಮಾಲೆಗಳ ನಡುವೆ ತಳಿರುತೋರಣಗಳಿಂದ ಅಲಂಕರಿಸಿದ್ದ ಇಡೀ ಸಭಾಂಗಣದ ಒಳಕ್ಕೆ ಪ್ರವೇಶಿಸಿದೊಡನೆ ಎಂಥವರನ್ನು ಮಂತ್ರಮುಗ್ಧರನ್ನಾಗಿಸುತಿತ್ತು. ಊರ ನಡುವೆ ಮಠ ಅನೇಕ ವ್ಯವಹಾರಗಳ ಪರಿವೆಯೇ ಇಲ್ಲದ ಬೇರೊಂದು ಲೋಕಕ್ಕೊಯ್ಯುವ ದಿವ್ಯ ಭವ್ಯ ವಾತಾವರಣ. ಬಹುಶಃ ಕೆಲವರಿಗೆ ಸೂರ್ಯೋದಯದ ಕಲ್ಪನೆಯೇ ಇರಲಿಲ್ಲವೆಂದರೂ ಅತಿಶಯೋಕ್ತಿಯಾಗಲಾರದು. ಸಭಾಂಗಣವನ್ನು ಬಿಟ್ಟು ಹೊರಬಂದು ದೈನಂದಿನ ಊಟ ವ್ಯವಹಾರಗಳನ್ನು ಯಾವ ಸಮಯದಲ್ಲಿ ತೊಡಗುತ್ತಿದ್ದರೋ ಅವರನ್ನೇ ಕೇಳಬೇಕು. ಮೂರು ನಾಲ್ಕು ದಿವಸಗಳು ಸಭಾಂಗಣ ಮತ್ತು ಶ್ರೀ ಕ್ಷೇತ್ರದ ಆವರಣ ತುಂಬಿಬಿಡುತ್ತಿತ್ತು. ಆ ಜನಸಂದಣಿ ಅಗಣಿತ ಅಸಂಖ್ಯಾತ, ಲೆಕ್ಕವಿಲ್ಲದಷ್ಟು, ಶ್ರೀ ಕ್ಷೇತ್ರದ ಇತಿಹಾಸದಲ್ಲಿಯೇ ಕಂಡರಿಯದ ವಿಶೇಷ ಜನಸಂದಣಿ. ಎದ್ದರೆ ಮತ್ತೆ ಸೇರಲು ಸ್ಥಳಸಿಗದು ಎಂಬ ಭಾವನೆ ಎಲ್ಲರಿಗೂ.

**ದಾಸೋಹ ವ್ಯವಸ್ಥೆ :** ಶ್ರೀ ಕ್ಷೇತ್ರದಲ್ಲಿ ಒಮ್ಮೆ ಹೊತ್ತಿಸಿದ ಒಲೆ ಆರದಿರುವ ವ್ಯವಸ್ಥೆಗೆ ಮಹಾ ದಾಸೋಹಿ ಶ್ರೀ ಭಗವಾನ್ ಬಸವೇಶ್ವರರ ಪರಂಪರೆಯ ಕೊಡುಗೆ. ಶ್ರೀ ಕ್ಷೇತ್ರದ ದಾಸೋಹ ವ್ಯವಸ್ಥೆ ಶತಮಾನಗಳಷ್ಟು ಇತಿಹಾಸವನ್ನು ಹೊಂದಿದೆ. ವೀರಶೈವ ಸಮಾಜವು ರಾಷ್ಟ್ರಕ್ಕೆ ಎರಡು ವಿಧವಾದ ಮಹೋಪಕಾರಗಳನ್ನು ಹತ್ತಾರು ಶತಮಾನಗಳಿಂದಲೂ ಅವ್ಯಾಹತವಾಗಿ ಮಾಡಿಕೊಂಡುಬಂದ ಉಜ್ವಲ ಪರಂಪರೆಯ ಇತಿಹಾಸ ಭಾರತೀಯ ಅನ್ನ-ವಿದ್ಯಾ-ಜ್ಞಾನ-ದಾನ ಇತಿಹಾಸ ಪರಂಪರೆಯನ್ನು ಅವಲೋಕಿಸಿದವರಿಗೆ ಅರಿವಾಗದೇ ಇರದು. ಜಗತ್ತಿಗೆ ಧರ್ಮದ ಕೊಡುಗೆ ಭರತಖಂಡದ್ದಾದರೆ, ಭರತಖಂಡಕ್ಕೆ ಅನ್ನ-ವಿದ್ಯಾ-ಜ್ಞಾನದ ಕೊಡುಗೆ ಸಾರ್ವತ್ರಿಕವಾದದ್ದು ಬಹುಶಃ ವೀರಶೈವ ಸಮಾಜದಲ್ಲಿ ಎಂದರೆ ತಪ್ಪಾಗಲಾರದು. "ಅನ್ನದಾನಂ ಪರಂ ದಾನಂ, ವಿದ್ಯಾದಾನಮತಃ ಪರಂ" ಎಂಬ ಆರ್ಯೋಕ್ತಿಯನ್ನು ಅನ್ವರ್ಥಗೊಳಿಸಿ ಅದರ ಆಚರಣೆ ಉಜ್ವಲ ಇತಿಹಾಸವನ್ನು ಉಳಿಸಿಕೊಂಡು ಬಂದಿರುವ ಸಂಸ್ಥೆಯೆಂದರೆ ಶ್ರೀ ಸಿದ್ಧಗಂಗಾ ಕ್ಷೇತ್ರ. ಬಸವಣ್ಣನವರ ಮಹಾ ಮನೆಯನ್ನು ಬಿಟ್ಟರೆ ಎರಡನೆಯ ಸ್ಥಾನ ಕೀರ್ತಿ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ, ಮತ್ತೆ ಶ್ರೀ ಕ್ಷೇತ್ರದ ಗುರು ಪರಂಪರೆಗೆ. ಬೃಹತ್ಪ್ರಮಾಣದ ತ್ರಿವಿಧ ದಾಸೋಹ ದಾನಕಾರ್ಯ ಅವಿರತವಾಗಿ ನಡೆದುಬರುತ್ತಿರುವ ಕ್ಷೇತ್ರ ಶ್ರೀ ಸಿದ್ಧಗಂಗಾ ಎಂಬುದು ಪ್ರಶಂಸೆಯ ಮಾತಲ್ಲ. ಪರಂತು ಅಭಿಮಾನಾದ ಮಾತು.

ಲಕ್ಷಾಂತರ ಮಂದಿ ಭಕ್ತಾದಿಗಳು ಸಮಾರಂಭವನ್ನು ನೋಡಬೇಕೆನ್ನುವ ಕುತೂಹಲ ಬರುವ ಅಂದಾಜು ಲೆಕ್ಕಕ್ಕೆ ಬೃಹತ್ ಪ್ರಮಾಣದ ದಾಸೋಹ ವ್ಯವಸ್ಥೆಯನ್ನು ಶ್ರೀ

ಶ್ರೀಗಳವರು ಮಾಡಿದ್ದರು. ವರ್ತಮಾನದಲ್ಲಿ ಯಾರು ಮಾಡಿರಬಾರದು. ಮಾಡಲು ಸಾಧ್ಯವಿಲ್ಲದ್ದು ಶ್ರೀಗಳವರ ದಾಸೋಹ ವ್ಯವಸ್ಥೆ. ಕಿಕ್ಕಿರಿದು ತುಂಬಿನಿಂತ ಪ್ರಸಾದ ನಿಲಯಗಳನ್ನು ನೋಡಿದಾಗ ಉಂಟಾದ ಆನಂದಕ್ಕೆ ಎಣೆಯಾದುದು ಮತ್ತೊಂದಿಲ್ಲ. ದಾಸೋಹದಲ್ಲಿ ತೃಪ್ತಿಕಂಡ ಶ್ರೀಗಳು ಬೃಹತ್‌ಪ್ರಮಾಣದ ವ್ಯವಸ್ಥೆಯನ್ನು ಸುಮಾರು 15 ಕಡೆಗಳಲ್ಲಿ ಮಾಡಿಸಿದ್ದರು. ಬಂದ ಭಕ್ತಾದಿಗಳು ಕಣ್‌ತಣಿಯುವ ಉತ್ಸವಸಮಾರಂಭಗಳು. ತನು-ಮನ ತೃಪ್ತಿ ಹೊಂದುವಂತಹ ಪ್ರಸಾದ ಕಾರ್ಯ ಅಣಿಗೊಳಿಸಬೇಕು. ಯಾವ ಮೂಲೆಯಿಂದಲೂ ಯಾವುದಕ್ಕೂ ಕಿಂಚಿತ್ತೂ ಊನ ಬರಬಾರದು. ರಾಮರಾಜ್ಯದಲ್ಲಿ ಅಗಸನ ಮಾತಿಗೂ ಬೆಲೆಯಿತ್ತು ಧರ್ಮರಾಜ್ಯದಲ್ಲಿ ಗೋವಳನ ಮಾತಿಗೂ ಮನ್ನಣೆಯಿತ್ತು, ಬಸವಣ್ಣನ ಮಹಾಮನೆಯಲ್ಲಿ ಪಂಚಮರ ಕುನ್ನಿಗೂ ಅಗ್ರಸ್ಥಾನ ಸಂದರೆ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ದಾಸೋಹದ ಮಹಾಮನೆಯಲ್ಲಿ ಪತಿತರೂ, ದೀನದಲಿತರೂ, ಪಂಚಮ ಪ್ರಧಾನರಿಗೂ ವಿಶೇಷ ಮನ್ನಣೆಯಿತ್ತು. ಹಸಿದವನು ಯಾರೇ ಆಗಲಿ ಇಲ್ಲಿ ಅನ್ನಕ್ಕೆ ಹಕ್ಕುದಾರಿ. ಶ್ರೀ ಶ್ರೀಗಳವರ ಸಾರ್ವತ್ರಿಕ, ಜಾತ್ಯತೀತ ಪ್ರಸಾದ ವ್ಯವಸ್ಥೆಯಲ್ಲಿ.

**ಶ್ರೀ ಕ್ಷೇತ್ರದ ಸುತ್ತಲೂ ಪ್ರಸಾದ ಮಂಟಪಗಳು :** ಶ್ರೀ ಸಿದ್ಧಲಿಂಗೇಶ್ವರ ಪ್ರಸಾದ ಮಂಟಪ, ಉದ್ಧಾನೇಶ್ವರ ಪ್ರಸಾದ ಮಂಟಪ, ಪ್ರಭುದೇವ ಪ್ರಸಾದ ಮಂಟಪ, ಬಸವೇಶ್ವರ ಪ್ರಸಾದ ಮಂಟಪ, ಚನ್ನಬಸವಣ್ಣನವರ ಪ್ರಸಾದ ಮಂಟಪ ಸಿದ್ಧರಾಮರ ಪ್ರಸಾದ ಮಂಟಪ. ಮಹಿಳೆಯರಿಗೆ ಪ್ರತ್ಯೇಕ ವ್ಯವಸ್ಥೆ ಸಮಾರಂಭದ ವಿಶೇಷತೆ. ಅಕ್ಕಮಹಾದೇವಿ ಮಂಟಪ, ಬ್ರಾಹ್ಮಣ ಬಂಧುಗಳಿಗೂ ಪ್ರತ್ಯೇಕ ವ್ಯವಸ್ಥೆ. ಹೀಗೆ ಅನೇಕ ಕಡೆ ಪ್ರಸಾದದ ವ್ಯವಸ್ಥೆ ಮಾಡಿತ್ತು ಇದಲ್ಲದೆ ತುಮಕೂರಿನಲ್ಲಿಯೂ ವಸತಿ ಮಾಡಿ ವ್ಯವಸ್ಥೆ ಮಾಡಿಸಿತ್ತು. ಪ್ರತಿ ಊಟಕ್ಕೂ ಸುಮಾರು ಹತ್ತು ವಿಧವಾದ ಪ್ರಸಾದ ವಿತರಣ ವ್ಯವಸ್ಥೆಯಿತ್ತು. ಬೃಹತ್ ಜನಸ್ತೋಮಕ್ಕೆಲ್ಲಾ ಮೊದಲನೆಯ ದಿವಸ ಮತ್ತು ಎರಡನೆಯ ದಿವಸಗಳು ಬೂಂದಿ ಊಟ, ಎರಡನೆಯ ದಿವಸ ಮಾಲ್ದಿ ಸಿಹಿಯೂಟ. ಮೂರು ದಿವಸಗಳು ಸಿಹಿಮಾತಿನ ಜೊತೆಗೆ ಸಿಹಿಯೂಟದ ರಸದೌತಣ. ತುಪ್ಪಬಡಿಸಿದ ವಿಶೇಷತೆ ಚಪ್ಪರಿಸಿದ ಬಾಯಿಯಿಂದಲೇ ಕೇಳಬೇಕು. "ಮೂರು ದಿವಸವೂ ತುಪ್ಪದ ಕೈ ನನಗೆ ಆರಲೇ ಇಲ್ಲ, ಮಾರಾಯರು ತುಪ್ಪದಲ್ಲಿ ಕೈ ತೊಳೆಸಿದರು, ಇಂಥಾದನ್ನು ಇನ್ನೆಂದಿಗೆ ನಾವು ನೋಡ್ತೀವೆಯೊ ನಾವೇ ಪುಣ್ಯವಂತರು" ಎಂದದ್ದುಂಟು. ಬೆಳಗಿನ ತಿಂಡಿ ಬಡಿಸುವುದರಿಂದ ಹಿಡಿದು ರಾತ್ರಿ ಸುಮಾರು 12 ಘಂಟೆಯವರೆಗೆ ಊಟ ಬಡಿಸುತ್ತಿದ್ದ ನಮ್ಮ ಸ್ವಯಂ ಸೇವಕ ಉಪಾಧ್ಯಾಯರು, ಹಳೆಯ ವಿದ್ಯಾರ್ಥಿಗಳು, ನಮ್ಮ ವಿದ್ಯಾರ್ಥಿಗಳು, ಹಿತೈಷಿಗಳಿಗೆ ಬಳಲಿಕೆ ಕಂಡದ್ದಿಲ್ಲ. ಅವರ ಉತ್ಸಾಹ ಚಿಲುಮೆ ಶ್ರೀಗಳವರ ಆಶೀರ್ವಾದದಿಂದ ನೂರ್ಮಡಿಯಾಯಿತು. ಲವಲವಿಕೆ ಕುಂದಲಿಲ್ಲ, ಸೋಮಾರಿತನ ಸುಳಿಯಲಿಲ್ಲ, ಎಲ್ಲರ ಮುಖ



ದಲ್ಲಿಯೂ ಸೇವಾಭಾಗ್ಯದೊರೆತ ಸಂತೃಪ್ತಿ, ಕೃತಾರ್ಥತೆ, ಧನ್ಯತೆ ಪಡೆದ ಅಮಿತಾನಂದ ನರ್ತನ ಮಾಡುತ್ತಿದ್ದವು, ಸ್ಪರ್ಧೆಯ ಪೈಪೋಟಿ ನಡೆಸಿದುವು. ಹಸಿವು ದಣಿವುಗಳು ಬಹುಷಃ ಶ್ರೀಗಿರಿಯ ಗುಹೆ ಹೊಕ್ಕವೋ ಏನೋ ಅವರ ಸೇವಾಕಾರ್ಯದ ಉತ್ಸಾಹ ಕಾರಂಜಿ ಬತ್ತಲಿಲ್ಲ.

**ಪೂರ್ವ ಸಿದ್ಧತೆ :** ಶ್ರೀ ಕ್ಷೇತ್ರದಲ್ಲಿ ಸುಮಾರು 15 ದಿವಸಗಳಲ್ಲಿ ನಡೆದ ಕಾರ್ಯ ಸಿದ್ಧತೆಗಳು ಒಂದು ಎರಡು ವರ್ಷಗಳು ಮಾಡಿದರೂ ಮುಗಿಯದ ಕಾರ್ಯಗಳು. ಎಲ್ಲವೂ ಹೇಗೆ ಮುಗಿದವೋ ಹೇಳತೀರದು, ಹಗಲು ರಾತ್ರಿಯೆನ್ನದೆ ಇಡೀ ದಿನವೆಲ್ಲ ಕಟ್ಟಡಗಳಿಗೆ ಸುಣ್ಣಬಣ್ಣ ಹಚ್ಚುವುದು, ಅರ್ಧ ಕೆಲಸವಾಗಿದ್ದ ಕೆಲವು ಕಟ್ಟಡಗಳ ಮುಕ್ತಾಯ ಒಂದು ಕಡೆ.

**ಮರಗೆಲಸ :** ಮಂಚ, ಕುರ್ಚಿ, ಪೀಠೋಪಕರಣಗಳ ವ್ಯವಸ್ಥೆ, ಪ್ರಾಯಃ ಈ ಶತಮಾನದ ಆದಿಯಲ್ಲಿ ಶ್ರೀ ಕ್ಷೇತ್ರದ ಪುಷ್ಕರಿಣಿ (ಕಲ್ಯಾಣಿ) ಶುಚಿಗೊಳಿಸಲ್ಪಟ್ಟಿತ್ತೋ ಏನೋ ಕೇವಲ ಎರಡು ಮೂರು ದಿನಗಳಲ್ಲಿ ಪೂರ್ಣ ಶುಚಿಯಾದುದು ನಿಜಕ್ಕೂ ಅದ್ಭುತವಾದುದು. ಆ ಕಾರ್ಯದಲ್ಲಿ ಅನೇಕ ಗ್ರಾಮಾಂತರ ಬಂಧುಗಳೂ ನೆರವಾಗಿದ್ದರೂ, ಎಲ್ಲಕ್ಕೂ ಮಿಗಿಲಾಗಿ ಶ್ರೀ ಕ್ಷೇತ್ರದ ವಿದ್ಯಾರ್ಥಿಗಳು ಇಡೀ ರಾತ್ರಿಯೆಲ್ಲ ನಿಂತು ಮಾಡಿದ ಕೆಲಸ ಹೃದಯ ತುಂಬಿಬಂದ ಸನ್ನಿವೇಶ. ಶ್ರೀ ಕ್ಷೇತ್ರದ ವಿದ್ಯಾರ್ಥಿಗಳು ಪರೀಕ್ಷೆಯನ್ನು ಪರಿಗಣಿಸಲಿಲ್ಲ, ನಿದ್ದೆಯನ್ನು ಗೆದ್ದು ನಡೆಸಿದ ಹೋರಾಟಕಾರ್ಯ. ವೇದಿಕೆಗೆ ಭರ್ತಿ ತುಂಬುವುದಾಗಲಿ, ಮರದ ದಿಮ್ಮಿಗಳನ್ನು ಸಾಗಿಸುವುದಾಗಲಿ, ಕಲ್ಲು ಬಂಡೆಗಳನ್ನು ಒದಗಿಸುವುದಾಗಲಿ, ಒಂದಲ್ಲ ಎರಡಲ್ಲ ಅಸಂಖ್ಯ ಕೆಲಸಕಾರ್ಯಗಳು. ಶ್ರೀಗಳವರ ಅಪ್ಪಣೆಯಾಗಿದ್ದರೆ, ಶ್ರೀಗಿರಿಯನ್ನು ಪಕ್ಕಕ್ಕೆ ಸರಿಸಿ ಸ್ಥಳಾವಕಾಶ ಮಾಡಿ ಕೊಡುತ್ತಿದ್ದರೇನೋ ಅಷ್ಟು ಉತ್ಸಾಹ ಶಕ್ತಿ ಸಾಮರ್ಥ್ಯ ಸಮಾರಂಭ ಕಾಲದ ಎಲ್ಲ ವಿದ್ಯಾರ್ಥಿಗಳು ಮತ್ತು ಹಿತೈಷಿಗಳ ಮನದಲ್ಲಿ ಮನೆಮಾಡಿಕೊಂಡಿತ್ತು. ಯಾವುದನ್ನು ಹೇಳುವುದು ಯಾವುದನ್ನು ಬಿಡುವುದು, ಹಲವು ಮಂದಿ ವಿದ್ಯಾರ್ಥಿಗಳು ಉಪಾಧ್ಯಾಯರು ಮತ್ತು ಆತ್ಮೀಯ ಭಕ್ತರು ತಮ್ಮೆಲ್ಲ ಕೆಲಸಕಾರ್ಯಗಳನ್ನು ಬದಿಗಿತ್ತು, ತಮ್ಮೆಲ್ಲ ಶಕ್ತಿಸಾಮರ್ಥ್ಯವನ್ನು ಮುಡಿಪುಗೈದಿದ್ದರೆಂದರೆ ತಪ್ಪಾಗಲಾರದು.

**ನಲ್ಲಿ ಹಾಕುವ ಕಾರ್ಯ :** ಪಂಪು ಜೋಡಿಸುವುದು, ಅಂಗಳಗಳನ್ನು ಶುಚಿಗೊಳಿಸುವುದು, ದವಸಧಾನ್ಯಗಳ ಶುಚಿ, ಸಿಹಿತಿಂಡಿಗಳನ್ನು ಮಾಡುವುದು, ಉರಿಯುವುದು, ಕುಟ್ಟಿಡುವುದು ಎರಡನೆ ಸಮಾರಂಭದಲ್ಲಿ ಸುಣ್ಣಬಣ್ಣವನ್ನು ತಳೆದು ಹೊಸತನವನ್ನು ಕಾಣದ ಕಟ್ಟಡವಿರಲಿಲ್ಲವೇನೋ ಎನ್ನಿಸುತ್ತಿದೆ. ಬಾವಿಗಳನ್ನು ಶುಚಿಗೊಳಿಸುವುದು, ಎಲ್ಲ ಕಡೆಗಳಲ್ಲಿಯೂ ಅಸ್ತವ್ಯಸ್ತವಾಗಿ ಉಪಯೋಗಕ್ಕೆ ಬರದಿದ್ದ ಶೌಚಗೃಹ ಶುಚಿತ್ವ, ಸುಮಾರು 20, 30 ಕಡೆಗಳಲ್ಲಿ ಕೆಲಸಕಾರ್ಯಗಳು ನಡೆಯು

ತ್ತಿದ್ದುವು. ತಮಗೆ ಬಿಡುವಿಲ್ಲದ ಅನಂತ ಕಾರ್ಯಗಳ ನಡುವೆ ಬಿಡುವು ಮಾಡಿಕೊಂಡು ಶ್ರೀಗಳವರು ಎಲ್ಲ ಕೆಲಸಕಾರ್ಯಗಳ ಪರಿಶೀಲನೆಯಲ್ಲಿ ತೊಡಗುತ್ತಿದ್ದರು. ಎಲ್ಲಿಕ್ಕೂ ವಿಶೇಷ ಸಲಹೆ ಸೂಚನೆಗಳು, ಈ ನಡುವೆ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮಗಳನ್ನು ಕಡಿಮೆ ಮಾಡಿ ಸಮಾರಂಭ ಮುಗಿದಮೇಲೆ ನಾಟಕ ಸಮಾರಂಭಗಳನ್ನು ಮಾಡಿದರಾಯಿತು ಎಂದು ಎಷ್ಟು ಜನ ಬಂದು ತಮ್ಮೆಲ್ಲ ಶ್ರಮ ವೆಚ್ಚ ಮಾಡಿದರೂ ಫಲಕಾರಿಯಾಗಲಿಲ್ಲ. ಹಾಕಿಕೊಂಡ ಕಾರ್ಯಕ್ರಮಕ್ಕೆ ಚ್ಯುತಿ ಬಾರದೆಂಬುದೇ ಶ್ರೀಗಳವರ ಸಂಕಲ್ಪ. ಪೂಜೆ, ಪ್ರಸಾದ, ನಿದ್ದೆಗಳನ್ನು ಯಾವಾಗ ಮಾಡುತ್ತಿದ್ದರೋ ಆ ಭಗವಂತನಿಗೇ ಗೊತ್ತು. ಪ್ರಾಯಃ ಮಾನವಿಕವಾದ ಆಹಾರ-ನಿದ್ರಾ ಭಯ ದೈಹಿಕಶ್ರಮ ಮುಂತಾದ ಗುಣಗಳನ್ನು ಗುರುವಿನ ಅಡಿದಾವರೆಗಳಲ್ಲಿ ಇಟ್ಟು ವ್ಯವಹರಿಸುತ್ತಿದ್ದರೇನೋ ಯಾರಿಗೆ ಗೊತ್ತು. "ಅಥಣಿ ಶಿವಯೋಗಿಗಳಿಗೆ ಒಮ್ಮೆ ದೈಹಿಕವಾದ ಜ್ವರಪೀಡೆ ಬಂತಂತೆ. ಅವರ ದೈಹಿಕ ಬಳಲಿಕೆಯನ್ನು ಕಂಡ ಲೌಕಿಕ ಭಕ್ತವೃಂದದವರು ವೈದ್ಯರನ್ನು ಕರೆತಂದರಂತೆ. ವೈದ್ಯರು ಬರುವ ಸೂಚನೆ ತಿಳಿದ ಶಿವಯೋಗಿಗಳು ಅವರು ಬಂದು ಹೋಗುವವರೆವಿಗೂ ತಮ್ಮ ಬೆತ್ತದಲ್ಲಿರುವಂತೆ ಜ್ವರಕ್ಕೆ ಆಜ್ಞಾಪಿಸಿದರಂತೆ. ವೈದ್ಯರು ಬಂದು ಪರೀಕ್ಷಿಸಿದರು, ಶಿವಯೋಗಿಗಳಿಗೆ ಜ್ವರ ಇರಲಿಲ್ಲವಂತೆ. ಮೂಲೆಯಲ್ಲಿದ್ದ ಬೆತ್ತ ಮಾತ್ರ ನಡುಗುತ್ತಿತ್ತಂತೆ. ವೈದ್ಯರು ಬಂದದಾರಿಗೆ ಸುಂಕವಿಲ್ಲದಂತೆ ಮರಳಿದರಂತೆ" ಬಹುಶಃ ಶ್ರೀಗಳಿಗೆ ಆಧಿವ್ಯಾಧಿ ಮೊದಲಾದ ತಾಪತ್ರಯಗಳು ಆಜ್ಞಾನುವರ್ತಿಗಳಾಗಿ ಸೇವೆಸಲ್ಲಿಸಿದುವೆಂದು ತೋರುತ್ತದೆ. ವಯೋಧರ್ಮಕ್ಕನುಗುಣವಾದ ದಣಿವು ಬಳಲಿಕೆ ಆಯಾಸಾದಿಗಳು ಬಂದಾಗ, ಸದ್ಯದಲ್ಲಿ ಹತ್ತಿರ ಬರಬೇಡಿರೆಂದು ಹೇಳಿಕಳುಹಿಸುತ್ತಿದ್ದರೇನೋ ತಿಳಿಯದು. ಸಂಕಲ್ಪ ಸಿದ್ಧಿಗಳ ಸಂಕಲ್ಪ ಶಕ್ತಿ ಆಳ ಅಂತರಾಳದ ಗಭೀರತೆಯನ್ನು ಅರ್ಥ ಮಾಡಿಕೊಳ್ಳುವ ಅರಿವಿದ್ದವರಿಗೆ ಸಾಧ್ಯ ಅದನ್ನು ತಿಳಿಯಲು ಅವರ ಲೋಕೋತ್ತರ ನಿಲುವು ಅಚಿಂತ್ಯ, ಅನುಗ್ರಿ, ಅವ್ಯಕ್ತ, ಅಸದೃಶ, ಅಪರಿಮಿತ, ಅತ್ಯದ್ಭುತ.

> ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಮಹಿಮಾಶಾಲಿಗಳು. ಎಲ್ಲ ಸಮಾಜದ ಹಿತವನ್ನೂ ಮೊದಲಿನಿಂದಲೂ ಮಾಡಿಕೊಂಡು ಬಂದವರು. ನಮ್ಮ ನಾಡಿನಲ್ಲೇಕೆ ಬೇರೆ ನಾಡಿನಲ್ಲೂ ಶ್ರೀ ಸಿದ್ಧಗಂಗಾ ಸಂಸ್ಥೆಯಂಥ ಇನ್ನೊಂದು ಸಂಸ್ಥೆ ನನ್ನ ಕಣ್ಣಿಗೆ ಬಿದ್ದಿಲ್ಲ. ಸಮಾಜಕ್ಕಾಗಿ, ರಾಷ್ಟ್ರಕ್ಕಾಗಿ ತಮ್ಮ ಸರ್ವಸ್ವವನ್ನೂ ಧಾರೆಯೆರೆದು ಸೇವಾ ಮನೋಭಾವದಿಂದ ವರ್ತಿಸುವ ಇಂಥ ಮಹಿಮಾಪುರುಷರ ಮಾರ್ಗದರ್ಶನ ನಮಗೆ ಬೇಕು.
>
> —ಡಿ. ದೇವರಾಜ ಅರಸು



# ಸುವರ್ಣ ಮಹೋತ್ಸವ ಸಮಾರಂಭದ ವಿಶೇಷ ವರದಿ 24-4-1982

ದಿನಾಂಕ 24–4–1982ರಂದು ಶನಿವಾರ ಪ್ರಾತಃಕಾಲ 6 ಘಂಟೆಗೆ ಸರಿಯಾಗಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರನ್ನು ಮಂಗಳ ಕಳಸ ಕುಂಭಗಳೊಂದಿಗೆ ವಿಧ್ಯುಕ್ತವಾಗಿ, ಉತ್ಸವಪೂರ್ವಕವಾಗಿ, ಭಕ್ತಿಪೂರ್ವಕವಾಗಿ 'ಶ್ರೀ ಉದ್ದಾನ ಶಿವಯೋಗಿ' ಮಂಟಪಕ್ಕೆ ಕರೆತರಲಾಯಿತು. ನಂತರ 7 ಘಂಟೆಗೆ 'ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಶ್ರೀ ಗಂಗಾಧರರಾಜ ಯೋಗೀಂದ್ರ ಸ್ವಾಮಿಗಳು, ಮೂರುಸಾವಿರ ಮಠ, ಹುಬ್ಬಳ್ಳಿ–ಇವರಿಂದ ಷಟ್‌ಸ್ಥಲ ಧ್ವಜಾರೋಹಣವು ನೆರವೇರಿಸಲ್ಪಟ್ಟಿತು. ಇದಾದನಂತರ ನೆರೆದ ಭಕ್ತಸಂದೋಹ ಶ್ರೀ ಉದ್ದಾನ ಶಿವಯೋಗಿ ಮಂಟಪದಲ್ಲಿ ಶ್ರೀ ಶ್ರೀಗಳವರ ದಿವ್ಯ ಪಾದಪೂಜೆಯಲ್ಲಿ ಪಾಲ್ಗೊಂಡು ಉಪಹಾರಕ್ಕಾಗಿ ಪ್ರಸಾದ ನಿಲಯಗಳಿಗೆ ತೆರಳಿತು. ಉಪಹಾರ ಮುಗಿದನಂತರ ರಾಷ್ಟ್ರಪತಿಗಳ ಸ್ವಾಗತ ನಿರೀಕ್ಷೆಯಲ್ಲಿತ್ತು. ಘನತೆವೆತ್ತ ರಾಷ್ಟ್ರಪತಿಗಳು ನಿರೀಕ್ಷೆಯಂತೆ 11 ಘಂಟೆಗೆ ಸರಿಯಾಗಿ ಆಗಮಿಸಿದರು. 11 ಘಂಟೆಯಿಂದ 11-10 ನಿಮಿಷದವರೆಗೆ ಶ್ರೀ ಕ್ಷೇತ್ರಕ್ಕೆ ಸ್ವಾಗತ ಮತ್ತು ಶ್ರೀಗಳವರ ಸಂದರ್ಶನ ಮಾಡಿದರು. ನಂತರ ವೇದಘೋಷ, ಪೂರ್ಣಕುಂಭ ಕಲಶ, ಮಂಗಳವಾದ್ಯಗಳೊಡನೆ ರಾಷ್ಟ್ರಪತಿಯವರನ್ನು ಸಭಾಂಗಣಕ್ಕೆ ಕರೆತರಲಾಯಿತು. ರಾಷ್ಟ್ರಗೀತೆಯನಂತರ 'ಶ್ರೀ ಶಿವಕುಮಾರ ಸ್ವಾಮೀಜಿ ಆಸ್ಪತ್ರೆಯ ಶಂಕುಸ್ಥಾಪನಾ ಮಹೋತ್ಸವವು ಕುಮಾರಿ ನಳಿನಾರವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ವೇದಘೋಷದೊಡನೆ ಸಮಾರಂಭಕ್ಕೆ ಮಂಗಳವನ್ನು ಕೋರಲಾಯಿತು. ನಂತರ ಸ್ವಾಗತಸಮಿತಿಯ ಅಧ್ಯಕ್ಷರಾದ ಶ್ರೀ ಕೆ. ತಿಪ್ಪೆರುದ್ರಯ್ಯನವರು ಸರ್ವರನ್ನೂ ತುಂಬು ಹೃದಯದಿಂದ ಸ್ವಾಗತಿಸಿದರು. ಆಮೇಲೆ ಡಾ|| ಎಸ್. ಎಂ. ಪಾಟೀಲರ ಪರವಾಗಿ ಶ್ರೀ ಹೆಚ್. ಶಿವಲಿಂಗಯ್ಯನವರು ಆಸ್ಪತ್ರೆ ಯೋಜನೆಯ ವರದಿಯನ್ನು ಸಭೆಯ ಮುಂದೆ ಓದಿದರು.

> ಶ್ರೀ ಸಿದ್ಧಗಂಗಾ ಕ್ಷೇತ್ರದ ದಿವ್ಯಜ್ಯೋತಿ ನಮ್ಮ ನಾಡನ್ನು ಕತ್ತಲೆಯಿಂದ ಬೆಳಕಿನತ್ತ ಕೊಂಡೊಯ್ಯುತ್ತಿರಲಿ ಎಂದು ಪ್ರಾರ್ಥಿಸುತ್ತೇನೆ.
>
> 22–4–1982 ಎಂ. ವಿ. ಸೀತಾರಾಮಯ್ಯ
> ಬೆಂಗಳೂರು

**"ಸಿದ್ಧಗಂಗಾಶ್ರೀ" ಅಭಿನಂದನಾ ಗ್ರಂಥ ಮತ್ತು ಸುವರ್ಣ ಮಹೋತ್ಸವ ಸವಿನೆನಪಿನ ಅಂಚೆ ಲಕೋಟೆಯನ್ನು ಬಿಡುಗಡೆ ಮಾಡುತ್ತಾ ಕರ್ನಾಟಕ ರಾಜ್ಯದ ಮುಖ್ಯ ಮಂತ್ರಿಗಳಾದ**

## ಮಾನ್ಯ ಶ್ರೀ ಆರ್. ಗುಂಡೂರಾವ್‌ರವರು ಮಾಡಿದ ಭಾಷಣ

'ಪವಿತ್ರವಾದ ಸಿದ್ಧಗಂಗಾ ಕ್ಷೇತ್ರದಲ್ಲಿ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಸಂದರ್ಭ. ಮಾನ್ಯ ರಾಷ್ಟ್ರಪತಿಯವರು ಶ್ರೀ ಶಿವಕುಮಾರ ಸ್ವಾಮೀಜಿಯವರ ಆಸ್ಪತ್ರೆಯ ಶಂಕು ಸ್ಥಾಪನೆಯ ಹಿನ್ನೆಲೆಯಲ್ಲಿ ಪೂಜ್ಯ ಶಿವಕುಮಾರ ಸ್ವಾಮೀಜಿಯವರ ಅಭಿನಂದನಾ ಗ್ರಂಥ "ಸಿದ್ಧಗಂಗಾಶ್ರೀ" ಯನ್ನು ಬಿಡುಗಡೆ ಮಾಡಲು ನನಗೆ ಸಂತೋಷವಾಗುತ್ತಿದೆ. ಶ್ರೀ ಸಿದ್ಧಗಂಗಾ ಮಠ ಹರಡಿಕೊಂಡಿರುವ ಕಾರ್ಯಕ್ರಮ ಅನಂತ. ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಸ್ವಾಮೀಜಿಯವರ ಸೇವೆ ಕೊಡುಗೆ, ಅಪಾರವಾಗಿದೆ. ಅಸಾಧಾರಣವಾಗಿದೆ. ಶ್ರೀ ಶೂನ್ಯ ಸಿಂಹಾಸನ ಪರಂಪರೆಯಲ್ಲಿ ಬೆಳೆದುಬಂದ ಶ್ರೀ ಕ್ಷೇತ್ರದಲ್ಲಿ ಶೈಕ್ಷಣಿಕ, ದಾಸೋಹ ಕಾರ್ಯಗಳು ಎಲ್ಲರನ್ನೂ ಮೆಚ್ಚಿಸುವಂಥದ್ದು. ಅಷ್ಟೇ ಏಕೆ ? ಅದಕ್ಕೆ ಸರಿಸಮಾನವಾದ ಕಾರ್ಯ ಮತ್ತೊಂದಿರಲಿಕ್ಕಿಲ್ಲ ಎಂದರೆ ಅತಿಶಯೋಕ್ತಿಯಲ್ಲ. ಈ ಅಭಿನಂದನಾ ಗ್ರಂಥದಲ್ಲಿ ಪೂಜ್ಯ ಸ್ವಾಮೀಜಿಯವರ, ಕ್ಷೇತ್ರದ ವಿಷಯದ ವಿಸ್ತಾರವಾದ ಇತಿಹಾಸವಿದೆ. ವಿಭಿನ್ನ ದೃಷ್ಟಿಕೋನಗಳುಳ್ಳ ವಿದ್ವಾಂಸರ ಬರಹಗಳಿವೆ. ಧಾರ್ಮಿಕ ನೆಲಗಟ್ಟಿನ ಮೇಲೆ ನಿಂತ ಮಹಾನ್ ವ್ಯಕ್ತಿ, ಶೈಕ್ಷಣಿಕ ಸಾಮಾಜಿಕವಾಗಿ ಏನನ್ನು ಸಾಧಿಸಬಹುದು, ತನ್ನ ಭಕ್ತಕೋಟಿಯ ನೆರವಿನಿಂದ ಎನ್ನುವುದಕ್ಕೆ ನೇರ ದೃಷ್ಟಾಂತ ಇಲ್ಲಿದೆ. ಈ ಗ್ರಂಥ ಇತರ ಸಂಘ ಸಂಸ್ಥೆಗಳಿಗೆ ಸ್ಫೂರ್ತಿ ನೀಡಲು, ಉದ್ಯುಕ್ತವಾಗಬಹುದೆಂದು ಆಶಿಸುತ್ತೇನೆ.

ಗೌರವಾನ್ವಿತ ರಾಷ್ಟ್ರಪತಿಗಳು ಈವೊತ್ತು ಶಿವಕುಮಾರ ಸ್ವಾಮೀಜಿಯವರ ಆಸ್ಪತ್ರೆಯ ಶಂಕು ಸ್ಥಾಪನೆಯನ್ನು ನೆರವೇರಿಸಲಿದ್ದಾರೆ. ಇದು ಬರೀ ಒಂದು ಕಟ್ಟಡವಲ್ಲ, ಒಂದು ಸಂಸ್ಥೆಯಲ್ಲ. ಸುತ್ತಮುತ್ತಣ ಗ್ರಾಮೀಣ ಬಡಜನತೆಯ ಆರೋಗ್ಯ ರಕ್ಷಣೆ ಆರೋಗ್ಯ ಸಂವರ್ಧನೆ ಸಾಧನವಾಗಲೆಂಬುದೇ ನಮ್ಮೆಲ್ಲರ ಆಶೈಕೆ. ಸರ್ಕಾರದ ಪ್ರಯತ್ನ ಈ ದಿಸೆಯಲ್ಲಿ ಸಾಕಷ್ಟು ಮುಂದುವರಿದಿದ್ದರೂ ಎಲ್ಲಾ ಕಡೆ ಆರೋಗ್ಯ ಸೌಲಭ್ಯವನ್ನು ವಿಸ್ತರಿಸಲು ಸಾಧ್ಯವಾಗಿಲ್ಲ. ಇಂಥ ಸಂದರ್ಭದಲ್ಲಿ ಧಾರ್ಮಿಕ ಸಂಸ್ಥೆಗಳು, ಸಾಮಾಜಿಕ ಸಂಸ್ಥೆಗಳು ಮುಂದೆಬಂದು ಈ ಕಾರ್ಯವನ್ನು ವಹಿಸಿಕೊಂಡರೆ ಎಲ್ಲರಿಗೂ ಆರೋಗ್ಯ ಸೌಕರ್ಯ ತಲುಪುವುದರಲ್ಲಿ ಸಂಶಯವಿಲ್ಲ. ಈವರೆಗಿನ ವೈದ್ಯಕೀಯ ಪ್ರಗತಿಯನ್ನು ಲಕ್ಷ್ಯಪೂರ್ವಕವಾಗಿ ನೋಡಿದರೆ ಅವು ನಗರಗಳಲ್ಲಿಯೇ ಕೇಂದ್ರೀಕೃತವಾಗಿವೆ.



ಗ್ರಾಮಾಂತರ ಪ್ರದೇಶಗಳಲ್ಲಿ ಯಾವುದು ಆವಶ್ಯಕವೋ ಅನಿವಾರ್ಯವೋ ಅವು ಸರಿಯಾಗಿ ಅವರಿಗೆ ತಲುಪುತ್ತಿಲ್ಲ. ಧಾರ್ಮಿಕ ಮತ್ತು ಸಾಮಾಜಿಕ ಸಂಸ್ಥೆಗಳು ಈ ಕಾರ್ಯವನ್ನು ಕೈಗೊಂಡಲ್ಲಿ ಗ್ರಾಮಾಂತರಗಳಲ್ಲಿ ಈ ಸೌಲಭ್ಯವನ್ನು ವಿಸ್ತರಿಸುವುದು ಸುಲಭಸಾಧ್ಯ. ಅದಕ್ಕಾಗಿ ಸುತ್ತಮುತ್ತಲಿನ ಗ್ರಾಮೀಣರ ಆರೋಗ್ಯ ಬಗ್ಗೆ ಅಧ್ಯಯನ, ಸಂಶೋಧನೆ, ಚಿಕಿತ್ಸೆ ಇತ್ಯಾದಿಗಳನ್ನು ಮನವರಿಕೆ ಮಾಡಿಕೊಳ್ಳುವ ರೂಪಿಸಿಕೊಳ್ಳುವ ಅವಕಾಶ ಈ ಸಂಸ್ಥೆಗೆ ಒದಗಿದೆ. ಜೊತೆಗೆ ಸ್ಫೂರ್ತಿ ನೀಡುತ್ತಿರುವ ಶ್ರೀ ಶ್ರೀಗಳವರಿಗೆ ಆ ದಿವ್ಯ ಶಕ್ತಿಯಿದೆ. ಈ ಕಾರ್ಯದಲ್ಲಿ ಸರ್ಕಾರ ಸಹಾಯ ನೀಡಲು ಸದಾ ಸಿದ್ಧವಿದೆ.

ಧಾರ್ಮಿಕ ಸಂಸ್ಥೆಗಳನ್ನೂ ಮಠ ಮಾನ್ಯಗಳನ್ನು ಮುಚ್ಚಬೇಕು ಎನ್ನುವ ಕಾಲವೊಂದಿತ್ತು. ಈ ದಿನ ಆ ತರದ ಕಾಲವಿಲ್ಲ. ಮಠಗಳು ಬೆಳೆಯಬೇಕು, ಧಾರ್ಮಿಕ ಸಂಸ್ಥೆಗಳು ಉಳಿಯಬೇಕು ಮತ್ತು ಅದರ ಜೊತೆಗೆ ಅವು ವಿದ್ಯಾ ಕ್ಷೇತ್ರದಲ್ಲಿ ಮುಂದುವರಿಯಬೇಕು ಎಂಬ ಇಚ್ಛೆಯನ್ನು ಹೊತ್ತ ನಮ್ಮ ಸರ್ಕಾರ ಮಠಗಳ ದಿನನಿತ್ಯದ ಎಲ್ಲ ವ್ಯವಹಾರಗಳಲ್ಲಿ ಕೈ ಹಾಕದೆ, ಸೂಕ್ತ ನೆರವನ್ನು ಕೊಡುತ್ತಿದೆ. ಬಡವರಿಗೆ ಗ್ರಾಮೀಣ ಬಂಧುಗಳಿಗೆ ಉಚಿತವಾಗಿ ಅನ್ನ ವಸತಿಗಳನ್ನು ಕೊಟ್ಟು ವಿದ್ಯಾ ಪ್ರಸಾರಕಾರ್ಯದಲ್ಲಿ ನಮ್ಮ ನಾಡಿನಲ್ಲಿ ಅಲ್ಲದೆ ಇಡೀ ನಮ್ಮ ರಾಷ್ಟ್ರದಲ್ಲಿಯೇ ಅಗ್ರ ಸೇವೆಯನ್ನು ಸಲ್ಲಿಸುತ್ತಿರುವ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೂ ಶ್ರೀ ಕ್ಷೇತ್ರದ ಗುರುವರ್ಯರಿಗೂ ಭಗವಂತನು ಹೆಚ್ಚು ಆಯುರಾರೋಗ್ಯಗಳನ್ನು ಕರುಣಿಸಲೆಂದು ಪ್ರಾರ್ಥಿಸಿ, ಸಂತೋಷದಿಂದ ಈ ಗ್ರಂಥವನ್ನು ಬಿಡುಗಡೆ ಮಾಡುತ್ತಿದ್ದೇನೆ. ಜೈಹಿಂದ್

ತಮ್ಮ ಜೀವಿತ ಕಾಲಾವಧಿಯಲ್ಲಿ ಹಲವು ಹನ್ನೊಂದು ಮುಖಗಳ ಕಾಯಕವನ್ನು ಇಷ್ಟೊಂದು ಬೃಹತ್ಪ್ರಮಾಣದಲ್ಲಿ ಮಾಡಿದರೆಂದರೆ ಮುಂದಿನ ಜನಾಂಗ ನಂಬಿತೆ ? ಇಂಥವರೊಬ್ಬರು ಬದುಕಿದ್ದರೆಂದರೂ ಮುಂದಿನ ಜನಾಂಗ ಒಪ್ಪಲಿಕ್ಕಿಲ್ಲ.

18–4–82 ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳು

ಇಲಕಲ್ಲು

## ಕೇಂದ್ರ ಸಾರಿಗೆ ಮತ್ತು ನೌಕಾಯಾನ ಸಚಿವರಾದ
## ಶ್ರೀ ವೀರೇಂದ್ರ ಪಾಟೀಲರ ಭಾಷಣದ ಸಾರ

ಇಂತಹ ಜನ ಸಮೂಹ ಈ ಸುಂದರ ಸಮಾರಂಭದಲ್ಲಿ ಭಾಗವಹಿಸುವುದು ನೋಡುವುದು ನನ್ನ ಜೀವನದಲ್ಲಿಯೇ ಮೊದಲನೆಯದು ಎಂದು ತಿಳಿದು ಕೊಂಡಿದ್ದೇನೆ. ಶ್ರೀ ಸ್ವಾಮೀಜಿಯವರು ಶ್ರೀ ಕ್ಷೇತ್ರದಲ್ಲಿ ಕಳೆದ 50 ವರ್ಷಗಳಿಂದ ಸತತವಾಗಿ ಅನ್ನ ದಾಸೋಹ ಜ್ಞಾನ ದಾಸೋಹವನ್ನು ನಡೆಸಿಕೊಂಡು ಬರುತ್ತಿದ್ದಾರೆ. ಇವತ್ತಿನ ದಿವಸ ಶ್ರೀ ಶ್ರೀಗಳವರು ಒಂದು ಹೊಸ ಅಧ್ಯಾಯ ಪ್ರಾರಂಭ ಮಾಡಿದ್ದಾರೆ. ಇಲ್ಲಿಯವರೆಗೆ ಅವರು ಕೇವಲ ವಿದ್ಯಾಕ್ಷೇತ್ರದಲ್ಲಿಯೇ ತಮ್ಮ ಜೀವನವನ್ನು ಸವೆಸುತ್ತಿದ್ದರು. ತಮ್ಮೆಲ್ಲರಿಗೂ ಗೊತ್ತಿರುವಂತೆ ಈ ನೂರಾರು ವಿದ್ಯಾ ಸಂಸ್ಥೆಗಳನ್ನು ಅವರು ಸ್ಥಾಪನೆ ಮಾಡಿದ್ದಾರೆ. ಬಹುಷಃ ಇಂಥ ಒಂದು ಇತಿಹಾಸ ಕರ್ನಾಟಕದಲ್ಲಿ ಯಾರು ಮಾಡಿರಲಿಕ್ಕಿಲ್ಲ ಎಂದು ಹೇಳುವುದು ಅತಿಶಯೋಕ್ತಿ ಯಾಗಲಾರದೆಂದು ಭಾವಿಸುತ್ತೇನೆ. ಇನ್ನೂರು ಹಾಸಿಗೆಯ ಆಸ್ಪತ್ರೆಯನ್ನು ಸ್ಥಾಪನೆ ಮಾಡುತ್ತಿದ್ದಾರೆ. ಈ ಇನ್ನೂರರ ಸಂಖ್ಯೆ ಕೊನೆಯ ಹಂತಕ್ಕೆ ಬಂದಾಗ 800 ಸಂಖ್ಯೆಯನ್ನು ಮುಟ್ಟುತ್ತದೆ ಒಟ್ಟು ಈ ಆಸ್ಪತ್ರೆಗೆ ಮೂರು ಕೋಟಿ ರೂ ಖರ್ಚಾಗುತ್ತದೆ. ನಾನು ವೈಯಕ್ತಿಕವಾಗಿ ಹಾಗೂ ಕರ್ನಾಟಕ ಜನತೆಯ ಪ್ರತಿನಿಧಿಯಾಗಿ ಇದನ್ನು ಧೈರ್ಯದಿಂದ ಹೇಳ ಬಯಸುತ್ತಿದ್ದೇನೆ. ಪೂಜ್ಯ ಶ್ರೀ ಸ್ವಾಮೀಜಿಯವರ ವ್ಯಕ್ತಿತ್ವದ ಬಗ್ಗೆ, ಅವರ ಸೇವೆಯ ಬಗ್ಗೆ, ಇವತ್ತು ಇಲ್ಲಿ ನೆರೆದ ನಾವು ಹೆಮ್ಮೆ ಪಡುತ್ತಿಲ್ಲ, ಇಡೀ ಕರ್ನಾಟಕ ಜನವೇ ಹೆಮ್ಮೆ ಪಡುತ್ತಿದೆ. ಇವತ್ತು ಈ ಮಠದ ಆಸ್ತಿಯೇನು ? ಈ ಮಠದಲ್ಲಿ 3600 ಮಕ್ಕಳು, ಒಂದು ಜಾತಿಯಲ್ಲ, ಒಂದು ಪಂಥವಲ್ಲ ಯಾವ ಬೇಧ ಭಾವನೆ ಇಲ್ಲದಂತೆ ಈ ದಾಸೋಹದಲ್ಲಿ ಊಟ ಮಾಡುತ್ತಾ ಇದ್ದಾರೆ. ಮತ್ತು ವಿದ್ಯಾರ್ಜನೆ ಮಾಡುತ್ತಾ ಇದ್ದಾರೆ. ಸ್ವಾಮೀಜಿಯವರು ಎಷ್ಟು ಸಂಸ್ಥೆಗಳನ್ನು ಸ್ಥಾಪನೆ ಮಾಡಿದ್ದಾರೆ. ಇಂಜಿನಿಯರ್ ಕಾಲೇಜಿನಿಂದ ಹಿಡಿದು ವಿಜ್ಞಾನ, ಕಲಾ, ವಾಣಿಜ್ಯ ಶಿಕ್ಷಣ ತರಬೇತಿ, ಪ್ರೌಢಶಾಲೆ, ಮಾಧ್ಯಮಿಕ ಪ್ರಾಥಮಿಕ ಶಾಲೆಗಳವರೆಗೆ, ಹೀಗೆ ಪಟ್ಟಿ ಮಾಡುತ್ತಾ ಹೋದರೆ ಅಧಿಕ ಸಂಖ್ಯೆ ಯಾಗುತ್ತದೆ. ಇಂಥ ಒಂದು ಅಪ್ರತಿಮ ಸೇವೆ ಮಾಡಿದಂಥ ಸ್ವಾಮೀಜಿಯವರು ನಮ್ಮ ನಾಡಿನಲ್ಲಿ, ನಮ್ಮ ಮಧ್ಯದಲ್ಲಿ ಇದ್ದಾರೆ ಎಂಬುದು ಹೆಮ್ಮೆ ಅಭಿಮಾನ ತರುವಂಥ ವಿಷಯವಾಗಿದೆ. ಅವರು ಏನು ಒಂದು ಹೊಸ ಆಸ್ಪತ್ರೆಗೆ ಕೈ ಹಾಕಿದ್ದಾರೆ ಅದೊಂದು ದೊಡ್ಡ ಕೆಲಸ, ಒಂದು ಘನತರ ಜವಾಬ್ದಾರಿ. ಅವರ ವ್ಯಕ್ತಿತ್ವ ಅವರ ಪ್ರಭಾವ, ಅವರ ಶಕ್ತಿಯ ಮೇಲೆ ಸಂಪೂರ್ಣ ನಂಬಿಕೆ ಇದೆ. ಇನ್ನು ಕೆಲವೇ ನಿಮಿಷಗಳು ನಮ್ಮ ಗೌರವಾನ್ವಿತ ರಾಷ್ಟ್ರಪತಿಗಳು ಈ ಆಸ್ಪತ್ರೆಯ



ಅಸ್ತಿ ಭಾರ ಹಾಕುತ್ತಾರೆ. ಅವರು ಅಸ್ತಿ ಬಾರ ಹಾಕಿದ ಮೇಲೆ ಸುಮಾರು ಒಂದು ಒಂದೂವರೆ ವರ್ಷದಲ್ಲಿ ಇನ್ನೂರು ಹಾಸಿಗೆ ಆಸ್ಪತ್ರೆ ತಯಾರಾಗಬೇಕು ಎಂದು ಸ್ವಾಮೀಜಿಯವರಿಗೆ ಅರಿಕೆ ಮಾಡಿಕೊಳ್ಳಬೇಕಾಗಿಲ್ಲ ನಿಮ್ಮೆಲ್ಲರಿಗೆ ಅರಿಕೆ ಮಾಡಿಕೊಳ್ಳಬೇಕಾಗಿದೆ. ಏಕೆಂದರೆ ಈ ಕ್ಷೇತ್ರದ ಮುಖಾಂತರ ಏನು ಕೆಲಸ ನಡಿತಾ ಇದೆಯೋ, ಸ್ವಾಮೀಜಿಯವರಿಗೆ ಜನತೆಯ ಸಹಕಾರ ಸಿಗದೇ ಹೋಗಿದ್ರೆ ಇಂಥ ಒಂದು ಮಹತ್ ಸಾಧನೆ ಮಾಡಲಿಕ್ಕೆ ಸಾಧ್ಯವಾಗುತ್ತಾ ಇ ರ ಲಿ ಲ್ಲ. ಎಷ್ಟೇ ದೊಡ್ಡ ವ್ಯಕ್ತಿಯಾದರೂ ಅವರಿಗೆ ಜನಸಾಮಾನ್ಯರಿಂದ, ಸಮಾಜದಿಂದ ಸಹಕಾರ ಸಿಗದೇ ಹೋದ್ರೆ ಕೆಲಸಕಾರ್ಯಗಳನ್ನು ಮಾಡಲು ಸಾಧ್ಯವಿಲ್ಲ. ನಮಗೆ ಎರಡು ರೀತಿಯಿಂದ ವಿಶ್ವಾಸವಿದೆ. ಒಂದು ರಾಷ್ಟ್ರಪತಿಗಳು ಅಸ್ತಿಭಾರ ಹಾಕಿರುವುದರಿಂದ ಇದು ಕಲ್ಲಾಗಿ ನಿಲ್ಲೋದಿಲ್ಲ. ಎರಡನೆಯದು ನಮ್ಮ ಪೂಜ್ಯ ಸ್ವಾಮೀಜಿಯವರು ರಾಷ್ಟ್ರಪತಿಗಳನ್ನು ಕರೆಸಿಕೊಂಡು ಅಸ್ತಿಭಾರ ಹಾಕಿಸುತ್ತಾ ಇದ್ದಾರೆ. ಅವರ ಮೇಲೆ



ದೊಡ್ಡ ಜವಾಬ್ದಾರಿಇದೆ, ಅದರಲ್ಲಿ ನನಗೆ ವಿಶ್ವಾಸವಿದೆ. ಕಳೆದ25 ವರ್ಷಗಳಿಂದ ನಾನು ಸಮೀಪದಿಂದ ಸ್ವಾಮೀಜಿಯವರನ್ನು ನೋಡುತ್ತಾ ಇದ್ದೇನೆ. ಅವರು ಮಾಡಿದ ಕಾರ್ಯಸಾಧನೆಗಳನ್ನು ನಾನು ಅಧ್ಯಯನ ಮಾಡುವಂತ ಅವಕಾಶ ಸಿಕ್ಕಿದೆ. ಅವರು ಯಾವ ಕೆಲಸಕ್ಕೆ ಕೈಹಾಕಿದರೂ ಅದು ಸಿದ್ಧಿಯಾಗುತ್ತೇ ಹೊರತು ನಿರಾಶೆ ಯಾಗುವುದಿಲ್ಲ ಎಂಬ ಭರವಸೆ ನನಗಿದೆ. ಅದಕ್ಕಾಗಿ ನಾನು ವಿನಂತಿ ಮಾಡಿಕೊಳ್ಳುತ್ತೇನೆ. ಸ್ವಾಮೀಜಿಯವರು ವಿದ್ಯಾ ಕ್ಷೇತ್ರದಲ್ಲಿ ಅಪ್ರತಿಮ ಸೇವೆ ಮಾಡಿದ್ದಾರೆ. ಅದಕ್ಕೆ ಇನ್ನೊಂದು ನಿದರ್ಶನ ಸಿಕ್ಕಲಿಕ್ಕಿಲ್ಲ ಅಂತ ಅನಿಸುತ್ತದೆ.

ಇನ್ನೊಂದು ದೊಡ್ಡ ಮಹತ್‌ಸಾಧನೆಗೆ ಕೈಹಾಕಿದ್ದಾರೆ. ಈ ಸಾಧನೆ ಯಶಸ್ವಿಯಾಗಲು ಇಲ್ಲಿ ನೆರೆದವರು ಮಾತ್ರವಲ್ಲ ಇಡೀ ಕರ್ನಾಟಕದ ಜನತೆಯೇ ಸಹಕಾರ ನೀಡಬೇಕೆಂದು ಕಳಕಳಿಯಿಂದ ವಿನಂತಿಸಿಕೊಳ್ಳುತ್ತೇನೆ. ಇದಕ್ಕೆ ಹಣದ ಬರ ಅಭಾವ ಬರಲಿಕ್ಕಿಲ್ಲ ಎಂಬುದರ ಬಗ್ಗೆ ನನಗೆ ಆತ್ಮ ವಿಶ್ವಾಸವಿದೆ. ಇವತ್ತು ನಾನು ಬೆಳಿಗ್ಗೆ ಕಾರ್ಯಕ್ರಮಕ್ಕೆ ಹೊರಡುತ್ತಿದ್ದೆ. ಆ ಸಮಯಕ್ಕೆ ಸರಿಯಾಗಿ ಒಬ್ಬರು ನನಗೆ ಟೆಲಿಫೋನ್ ಮಾಡಿದರು. ಅವರ ಹೆಸರು ಕೋಡೆ ರಾಮಚಂದ್ರರಾಯರು. ಅವರು ಹೇಳಿದರು ಆಸ್ಪತ್ರೆಗೆ ಬೇಕಾದಂತ 100 ಹಾಸಿಗೆಗಳನ್ನು ಉಚಿತವಾಗಿ ಕೊಡುತ್ತೇನೆಂದು ಹೇಳಿದ್ದಾರೆ. ಬಹುಷಃ ಅದಕ್ಕೆ 1 ಲಕ್ಷಕ್ಕೆ ಕಮ್ಮಿಯಾಗಲಾರದು, ಈ ರೀತಿಯಿಂದ ನಾವೆಲ್ಲರೂ ಸಂಪೂರ್ಣ ಸಹಕಾರ ನೀಡಿದರೆ ಸ್ವಾಮೀಜಿಯವರು ಈ ದೊಡ್ಡ ಆಸ್ಪತ್ರೆಯ ಅಸ್ತಿಭಾರ ಹಾಕಿದರೆ, ಆ ಕೆಲಸ 1½ ವರ್ಷದಲ್ಲಿ ಭವ್ಯವಾದ ನಿರ್ಮಾಣವಾಗುತ್ತದೆ. ಅನೇಕ ರೋಗಿಗಳು ಬಂದು ಈ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಾರೆ ಎಂದು ನಂಬಿಕೊಂಡಿದ್ದೇನೆ. ನನ್ನ ಪರವಾಗಿ, ನಿಮ್ಮೆಲ್ಲರ ಪರವಾಗಿ, ಇಡೀ ಕರ್ನಾಟಕದ ಜನಾಂಗದ ಪರವಾಗಿ ಪ್ರಾರ್ಥನೆ ಮಾಡುವುದೇನೆಂದರೆ, ಸ್ವಾಮೀಜಿಯವರು ಇನ್ನು ಹೆಚ್ಚು ಹೆಚ್ಚು ಸಮಾಜ ಸೇವೆಯನ್ನು ಮಾಡುವಂಥ ಶಕ್ತಿ ಆಯುರಾರೋಗ್ಯಾದಿಗಳನ್ನು ಭಗವಂತ ಕರುಣಿಸಲೆಂದು ಪ್ರಾರ್ಥಿಸಿ, ಇಂಥ ಸುಂದರ ಸಮಾರಂಭದಲ್ಲಿ ನಿಮ್ಮ ಮಧ್ಯದಲ್ಲಿ ನಿಂತು ಮಾತನಾಡುವಂತ ಅವಕಾಶವನ್ನು ಕಲ್ಪಿಸಿದ ಎಲ್ಲರಿಗೂ ವಂದಿಸಿ ಭಾಷಣವನ್ನು ಮುಕ್ತಾಯ ಮಾಡುತ್ತೇನೆ.

ಸ್ವಾಮಿಗಳದು ಅಪೂರ್ವ ಸಿದ್ಧಿಯ ಜೀವನ. ಆಧ್ಯಾತ್ಮ, ಕರ್ಮಯೋಗ, ಮಾನವ ಸೇವೆ ಮತ್ತು ಸಿದ್ಧಿಯ ಜೀವನ. ಮಾನವ ಕಲ್ಯಾಣಕ್ಕಾಗಿ ಬಾಳಿದ ಜೀವನ. ಇಂಥ ಬಾಳು ಜಗತ್ತಿನಲ್ಲಿ ವಿರಳ. ಸ್ವಾಮಿಗಳು ನಮ್ಮೆಲ್ಲರನ್ನು ಆಶೀರ್ವದಿಸುತ್ತಾ ದೀರ್ಘಕಾಲ ನಮ್ಮ ನಡುವೆ ಬಾಳಲೆಂದು ಹಾರೈಸುತ್ತೇನೆ.

21–4–82

ಗೊರೂರು ರಾಮಸ್ವಾಮಿ ಅಯ್ಯಂಗಾರ್



## ಅತಿಥಿಯಾಗಿ ಆಗಮಿಸಿದ್ದ ರಾಜ್ಯದ ಆರೋಗ್ಯ ಸಚಿವ ಶ್ರೀ ಅಬ್ದುಲ್ ಸಮದ್‌ರವರು ಮಾಡಿದ ಭಾಷಣದ ಸಾರ

ಶ್ರೀ ಶಿವಕುಮಾರ ಸ್ವಾಮಿಗಳವರ ಸುವರ್ಣ ಮಹೋತ್ಸವ ನೆನಪಿನ ಆಸ್ಪತ್ರೆಯ ಶಂಕುಸ್ಥಾಪನಾ ಸಮಾರಂಭದಲ್ಲಿ ಭಾಗವಹಿಸಲು ಸಂತೋಷವಾಗುತ್ತಿದೆ. ಶ್ರೀ ಸ್ವಾಮೀಜಿಯವರ ಹೆಸರಿನ ಆಸ್ಪತ್ರೆ ಗ್ರಾಮಾಂತರ ಜನತೆಯ ಅಭಿವೃದ್ಧಿಗಾಗಿ ಕೊಡುವ ಕೊಡುಗೆಯಾಗಿದೆ. ಈಗಾಗಲೇ ನಾಡಿನಲ್ಲಿ ಜಿಲ್ಲಾ ಕೇಂದ್ರಗಳಲ್ಲಿ ಪರಮಾವಧಿ ಆರೋಗ್ಯ ಸೌಲಭ್ಯಗಳನ್ನು ಒದಗಿಸಲು ಸರ್ಕಾರ ಸಮಗ್ರ ಯೋಜನೆಯೊಂದನ್ನು ರೂಪಿಸಿದೆ. ಗ್ರಾಮಾಂತರದಲ್ಲಿ ಹೆಚ್ಚುಹೆಚ್ಚು ಆರೋಗ್ಯ ಸೌಲಭ್ಯ ವಿಸ್ತರಿಸಲು ಕಾರ್ಯಕ್ರಮವನ್ನು ಹಾಕಿಕೊಳ್ಳಲಾಗಿದೆ. ಸಂವಿಧಾನದ ರೀತ್ಯಾ ಆರೋಗ್ಯವು ಪ್ರತಿಯೊಬ್ಬ ಮಾನವನ ಪ್ರಾಥಮಿಕ ಹಕ್ಕು ಎಂಬುದನ್ನು ಗಮನಿಸಿ ವಿಶ್ವ ಆರೋಗ್ಯ ಸಂಸ್ಥೆಯು "ಎಲ್ಲರಿಗೂ ಆರೋಗ್ಯ" ಎನ್ನುವ ಘೋಷಣೆ ಮತ್ತು ನೆರವು ನೀಡಿರುವುದು ನಮ್ಮ ಕಾರ್ಯಕ್ರಮಕ್ಕೆ ಹೊಸ ಆಯಾಮ ನೀಡಿದೆ. ನಮ್ಮ ಕರ್ನಾಟಕ ಸರ್ಕಾರವು ಕಳೆದ 100 ವರ್ಷಗಳು ಮಹಾರಾಜರ ಕಾಲದಿಂದಲೂ ಆರೋಗ್ಯಕ್ಕೆ ಆದ್ಯಗಮನ ಕೊಡುತ್ತಾ ಬಂದಿದೆ.

ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಸುವರ್ಣ ಮಹೋತ್ಸವದ ನೆನಪಿನ 200 ಹಾಸಿಗೆಗಳ ಆಸ್ಪತ್ರೆ, ಇಲ್ಲಿನ ಗ್ರಾಮೀಣ ಜನತೆಯ ಆರೋಗ್ಯಾಭಿವೃದ್ಧಿ, ರೋಗ ನಿವಾರಣೆಯ ಸಂಶೋಧನೆ ಬಗ್ಗೆ ಹೆಚ್ಚು ಸಹಕಾರಿಯಾಗಲೆಂದು ಆಶಿಸುತ್ತೇನೆ. ಈ ಆಸ್ಪತ್ರೆ ರೋಗ ನಿಯಂತ್ರತೆಗಳನ್ನು ಒದಗಿಸುವುದರ ಬಗ್ಗೆ ಕ್ರಮ ಕೈಗೊಳ್ಳಬೇಕು. ಇದರ ಜೊತೆಗೆ ಸ್ವಾಮೀಜಿಯವರು ಗ್ರಾಮಾಂತರದಲ್ಲಿ ಅರೆ ವೈದ್ಯಕೀಯ ಸೇವಾ ಶಿಕ್ಷಣ ಸಂಸ್ಥೆಯನ್ನು ರೂಪಿಸುವಲ್ಲಿ ಮುಂದಾಗಬೇಕು. ಶ್ರೀ ಸಿದ್ಧಗಂಗಾ ಕ್ಷೇತ್ರ ವೈದ್ಯಕೀಯ ಕ್ಷೇತ್ರದಲ್ಲಿ ಕ್ರಾಂತಿಕಾರಿ ಯೋಜನೆ ರೂಪಿಸಲೆಂದು ಆಶಿಸಿ, ಈ ಪವಿತ್ರ ಸಮಾರಂಭದಲ್ಲಿ ಭಾಗವಹಿಸಲು ಅವಕಾಶ ನೀಡಿದ ಎಲ್ಲರಿಗೂ ವಂದಿಸಿ ಮುಕ್ತಾಯ ಮಾಡುತ್ತಿದ್ದೇನೆ. ಜೈಹಿಂದ್

ಯಾರು ಯಾವ ರಾಜ್ಯದಲ್ಲಿ ಇರುತ್ತಾರೋ ಅವರು ಆಯಾ ರಾಜ್ಯದ ಪ್ರಜೆಗಳಾಗಿ ಬಾಳಬೇಕು. ಕನ್ನಡ ನಾಡಿನಲ್ಲಿ ಬಂದು ಬದುಕಲು ಇಚ್ಛಿಸುವ ಜನ ಕನ್ನಡಿಗರಾಗಿ ಬಾಳಬೇಕು. ಕರ್ನಾಟಕದಲ್ಲಿದ್ದರೂ ತಮಿಳರಾಗಿ, ಕೇರಳೀಯರಾಗಿ ಪ್ರತ್ಯೇಕವಾಗಿ ಬಾಳಬೇಕೆಂದರೆ ಅಸಂಗತವಾಗುತ್ತದೆ.

—ಕೋ. ಚನ್ನಬಸಪ್ಪ

# ಕಾರ್ಯಕ್ರಮದ ಅಧ್ಯಕ್ಷಪೀಠದಿಂದ ಕರ್ನಾಟಕ ರಾಜ್ಯದ ಘನತೆವೆತ್ತ ರಾಜ್ಯಪಾಲರಾದ ಶ್ರೀ ಗೋವಿಂದ ನಾರಾಯಣರು

### ಮಾಡಿದ ಭಾಷಣದ ಸಾರ

ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಸುವರ್ಣ ಮಹೋತ್ಸವದ ನೆನಪಿನ 200 ಹಾಸಿಗೆಗಳ ಆಸ್ಪತ್ರೆಯ ಶಂಕು ಸ್ಥಾಪನೆಯನ್ನು ಘನವೆತ್ತ ರಾಷ್ಟ್ರಪತಿಯವರು ನೆರವೇರಿಸುತ್ತಿರುವ ಈ ಶುಭ ಸಂದರ್ಭದಲ್ಲಿ ಭಾಗವಹಿಸಲು ನನಗೆ ತುಂಬಾ ಸಂತೋಷವಾಗುತ್ತಿದೆ. ಇದೇ ಸಂದರ್ಭದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜು ಮತ್ತು ಸಾರ್ವಜನಿಕ ಉಚಿತ ವಿದ್ಯಾರ್ಥಿ ನಿಲಯಗಳ ವಜ್ರಮಹೋತ್ಸವವನ್ನೂ ಆಚರಿಸುತ್ತಿರುವುದು ಹೆಮ್ಮೆಯ ಸಂಗತಿಯಾಗಿದೆ. ನಾನು ಕಳೆದ 5 ವರ್ಷಗಳಿಂದಲೂ ಕರ್ನಾಟಕದ ರಾಜ್ಯಪಾಲನಾಗಿ ಶ್ರೀ ಸಿದ್ಧಗಂಗಾ ಕ್ಷೇತ್ರದ ಮತ್ತು ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಹಲವು ವಿದಧ ಕಾರ್ಯಚಟುವಟಿಕೆಗಳನ್ನು ನೋಡಿದ್ದೇನೆ. ಶ್ರೀ ಸಿದ್ಧಗಂಗಾ ಕ್ಷೇತ್ರವು ಸುಮಾರು 5 ಶತಮಾನಗಳಿಂದಲೂ ತನ್ನದೇ ಆದ ಪರಂಪರಾಗತ ವ್ಯಕ್ತಿತ್ವವನ್ನುಳಿಸಿಕೊಂಡುಬಂದ ಧಾರ್ಮಿಕ ಕೇಂದ್ರವಾಗಿದೆ. ಶ್ರೀ ಶಿವಕುಮಾರ ಸ್ವಾಮಿಗಳವರು ಜ್ಞಾನ ಹಾಗೂ ಕರ್ಮ ಯೋಗಗಳೆರೆಡರಲ್ಲಿಯೂ ಮಹಾ ಸಿದ್ಧಿಯನ್ನು ಪಡೆದ ಸಿದ್ಧಪುರುಷರು. ಹೊಸ ಜಗತ್ತನ್ನೇ ಸೃಷ್ಟಿಸಿದ ನಿಷ್ಕಾಮ ಕರ್ಮಯೋಗಿ. ಆ ನಿಷ್ಕಾಮ ಕರ್ಮದ ಬಲದ ಯೋಗದಿಂದ ಶ್ರೀ ಶ್ರೀಗಳವರು ಇಡೀ ಜನತೆಗೆ ಮಾರ್ಗದರ್ಶನ ನೀಡುತ್ತಲಿದ್ದಾರೆ. ಶ್ರೀ ಸಿದ್ಧಗಂಗಾ ಕ್ಷೇತ್ರವು ನಮ್ಮ ಭರತಖಂಡದ ಪ್ರಾಚೀನ ಸಂಸ್ಕೃತಿ ಹಾಗೂ ಧರ್ಮದ ಕೇಂದ್ರವಾಗಿದೆ. ಬಹಳ ದಿನಗಳಿಂದಲೂ ಈ ದಿಶೆಯಲ್ಲಿ ಜನತೆಯಲ್ಲಿ ಜಾಗೃತಿಯನ್ನುಂಟುಮಾಡುತ್ತಿದೆ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಕಳೆದ 50 ವರ್ಷಗಳಿಂದ ತಮ್ಮ ಅವಿರತವಾದ ಕಾಯಕನಿಷ್ಠೆಯಿಂದ ಶ್ರೀ ಕ್ಷೇತ್ರವನ್ನು ಸುಪ್ರಸಿದ್ಧ ವಿದ್ಯಾ ಕೇಂದ್ರವನ್ನಾಗಿ ಮಾಡಿದ್ದಾರೆ. ಅಲ್ಲದೆ ಈ ಪುಣ್ಯಪುರುಷರ ನೇತೃತ್ವದಲ್ಲಿ ಶೈಕ್ಷಣಿಕ ಕ್ರಾಂತಿಯೇ ಇಲ್ಲಿ ನಡೆದಿದೆ ಎಂದರೆ ತಪ್ಪಾಗಲಾರದು. ಇದಲ್ಲದೆ ಗ್ರಾಮೀಣ ಮಕ್ಕಳ ವಿದ್ಯಾಭಿವೃದ್ಧಿಗಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ, ನರ್ಸರಿ ಶಾಲೆಯಿಂದ ಹಿಡಿದು ಕಾಲೇಜಿನವರೆಗೆ ಅಲ್ಲದೆ ಇತ್ತೀಚೆಗೆ ಕುರುಡು ಮಕ್ಕಳ ಶಾಲೆಯನ್ನೂ ಸ್ಥಾಪಿಸಿರುವುದು ಅತ್ಯಂತ ಶ್ಲಾಘನೀಯ.

ಶ್ರೀ ಶಿವಕುಮಾರ ಸ್ವಾಮೀಜಿಯವರು ಪ್ರಾಚೀನ ಮತ್ತು ಆಧುನಿಕ ಪದ್ಧತಿಯ ವಿದ್ಯಾಭ್ಯಾಸಕ್ರಮದ ಆವಶ್ಯಕತೆಯನ್ನು ಅರಿತು ಶ್ರೀ ಕ್ಷೇತ್ರದಲ್ಲಿ ನೈತಿಕ ಹಾಗೂ ಆಧ್ಯಾತ್ಮಿಕ ಜ್ಞಾನಸಂಪಾದನೆಗೂ ಅವಕಾಶ ಮಾಡಿಕೊಟ್ಟಿದ್ದಾರೆ. ಇಲ್ಲಿನ ಸಾರ್ವಜನಿಕ ಉಚಿತ ವಿದ್ಯಾರ್ಥಿ ನಿಲಯದಲ್ಲಿ 3000ಕ್ಕೂ ಮಿಕ್ಕ ವಿದ್ಯಾರ್ಥಿಗಳಿಗೆ ಉಚಿತ ಅನ್ನದಾನ



ನಡೆಯುತ್ತಿದೆ. ಇಲ್ಲಿ ನಡೆಯುವ ಅನ್ನದಾನ–ವಿದ್ಯಾದಾನಗಳೆರಡರಿಂದಲೂ ಸಮಾಜದ ಜನತೆ ಹಾಗೂ ಮಕ್ಕಳ ಶಾರೀರಿಕ ಮತ್ತು ಜ್ಞಾನಗಳ ಬೆಳವಣಿಗೆಗೆ ಸಹಾಯಕವಾಗಿದೆ. ದಾಸೋಹ ಎಂದರೆ ಸಮಾಜದ ಸಂಪತ್ತನ್ನು ಸಮಾಜದ ಅಭಿವೃದ್ಧಿಗೇ ವಿನಿಯೋಗಿಸುವುದೆಂದರ್ಥ. ಈ ಅರ್ಥ ಇಲ್ಲಿ ಅಕ್ಷರಶಃ ಸತ್ಯವಾಗಿ ಪರಿಣಮಿಸಿದೆ. ಅನ್ನ ಜ್ಞಾನ ದಾಸೋಹದ ಇಂಥ ಪದ್ಧತಿಯನ್ನು ನೋಡಿದರೆ, ನಮ್ಮ ಪ್ರಾಚೀನ ಭಾರತೀಯ ಸಂಪ್ರದಾಯದ ಗುರುಕುಲಗಳಾದ ನಲಂದ, ತಕ್ಷಶಿಲಾ ವಿಶ್ವವಿದ್ಯಾಲಯಗಳು ನೆನಪಿಗೆ ಬರುತ್ತವೆ. ಆ ದೃಷ್ಟಿಯಿಂದ ಹೇಳುವುದಾದರೆ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಆಧುನಿಕ ಕುಲಪತಿ. ಶ್ರೀ ಸಿದ್ಧಗಂಗಾ ಕ್ಷೇತ್ರವು ಅಂತಹ ಗುರುಕುಲಗಳಲ್ಲಿ ಒಂದಾಗಿದೆ.

ಶ್ರೀ ಪೂಜ್ಯ ಸ್ವಾಮೀಜಿಯವರ ನೇತೃತ್ವದಲ್ಲಿ ನಡೆಯುತ್ತಿರುವ ಎಲ್ಲ ವಿದ್ಯಾಸಂಸ್ಥೆಗಳೂ ವಿದ್ಯೆಯ ಪವಿತ್ರ ಗುರಿಯನ್ನು ಸಾಧಿಸುವುದರಲ್ಲಿ ಯಶಸ್ವಿಯಾಗಿವೆ. ಬಡಮಕ್ಕಳ ವಿದ್ಯಾಭಿವೃದ್ಧಿಗಾಗಿ, ಊಟ-ವಸತಿಯ ಸೌಕರ್ಯಕ್ಕಾಗಿ ಕರ್ನಾಟಕದಲ್ಲಿಯಲ್ಲದೇ ಆಂಧ್ರಪ್ರದೇಶದಲ್ಲಿಯೂ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದ್ದಾರೆ. ಆಧುನಿಕ ಶಿಕ್ಷಣದ ಆವಶ್ಯಕತೆಯನ್ನು ಅರಿತ ಶ್ರೀ ಸ್ವಾಮೀಜಿಯವರು ಸುಸಜ್ಜಿತವಾದ ಸಿದ್ಧಗಂಗಾ ತಾಂತ್ರಿಕ ಮಹಾ ವಿದ್ಯಾಲಯವನ್ನು ಸ್ಥಾಪಿಸಿದ್ದಾರೆ. ಇದರಲ್ಲಿರುವ ಸಿವಿಲ್, ಎಲೆಕ್ಟ್ರಿಕಲ್, ಮ್ಯಾಕಾನಿಕಲ್, ಕೆಮಿಕಲ್ ಮತ್ತು ಇನ್ಸ್ಟ್ರುಮೆಂಟೇಷನ್ ವಿಭಾಗಗಳಲ್ಲಿ ಸುಮಾರು 2000 ಮಿಕ್ಕು ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿರುವುದು ಸಂತೋಷದ ವಿಚಾರ. ಈ ತಾಂತ್ರಿಕ ಕಾಲೇಜಿನಲ್ಲಿ ಭಾರತದ ಬೇರೆ ಬೇರೆ ಪ್ರಾಂತಗಳಲ್ಲದೇ ಅಂತರಾಷ್ಟ್ರೀಯ ವಿದ್ಯಾರ್ಥಿಗಳೂ ವ್ಯಾಸಂಗ ಮಾಡುತ್ತಿರುವುದು ಹೆಮ್ಮೆಯ ಸಂಗತಿ.

ಕೈಗಾರಿಕಾ ದೃಷ್ಟಿಯಿಂದ ತುಮಕೂರು ಜಿಲ್ಲೆಯೂ ಹಿಂದುಳಿದಿದೆ. ಅದರ ಅಭಿವೃದ್ಧಿಗಾಗಿ ಹೆಚ್.ಎಂ.ಟಿ. ಬೃಹತ್ ಕಾರ್ಖಾನೆಯನ್ನು ಸ್ಥಾಪಿಸಿರುವುದರ ಜೊತೆಗೆ ಬಿ.ಹೆಚ್.ಇ.ಎಲ್., ಎನ್.ಜಿ.ಇ.ಎಫ್. ಮತ್ತು ಐ.ಟಿ.ಐ. ಕಾರ್ಖಾನೆಯ ಘಟಕಗಳು ಸ್ಥಾಪನೆಯಾಗುವುದರಿಂದ ಇಲ್ಲಿನ ತಾಂತ್ರಿಕ ವಿದ್ಯಾಭ್ಯಾಸಕ್ಕೆ ಒಂದು ಮಹತ್ವ ಬರುತ್ತದೆ. ಮತ್ತು ಈ ಕೈಗಾರಿಕಾಭಿವೃದ್ಧಿಯ ಜೊತೆಗೆ ಜನಸಂಖ್ಯೆ ಅಧಿಕಗೊಳ್ಳುತ್ತದೆ. ಜನಸಂಖ್ಯೆ ಅಧಿಕಗೊಂಡಂತೆಲ್ಲಾ ವೈದ್ಯಕೀಯ ಸೌಲಭ್ಯ ಅತ್ಯಂತ ಆವಶ್ಯಕ. ಇಂತಹ ಸನ್ನಿವೇಶದಲ್ಲಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಜನತೆಯ ಆರೋಗ್ಯ ಸಂರಕ್ಷಣೆಯ ಸೇವೆಗೆಂದು 200 ಹಾಸಿಗೆಗಳುಳ್ಳ ಆಸ್ಪತ್ರೆಯೊಂದನ್ನು ನಿರ್ಮಾಣ ಮಾಡಲು ಸಂಕಲ್ಪ ಮಾಡಿರುವುದು ಐತಿಹಾಸಿಕ ಅಂಶವೇ ಸರಿ. ಆಸ್ಪತ್ರೆಯಲ್ಲಿ ಶೇ. 10 ರಷ್ಟು ಉಚಿತ ಸೇವೆಯನ್ನು ವ್ಯವಸ್ಥೆಗೊಳಿಸಲಿರುವುದು ಅತ್ಯಂತ ಪ್ರಶಂಸನೀಯ. ಹಾಗೂ ಶ್ರೀ ಶ್ರೀ ಸ್ವಾಮೀಜಿಯವರ ಮಾನವೀಯ ಅನುಕಂಪದ ಪರಮ

ದ್ಯೋತಕ. ಶ್ರೀ ಸ್ವಾಮೀಜಿಯವರು ಬಹುದಿನಗಳಿಂದ ಮಾಡಿರುವ ಸಮಾಜ
ಸೇವೆಯ ಕುರುಹು, ಈ ಆಸ್ಪತ್ರೆಯ ಸ್ಥಾಪನೆ. ಆ ಸೇವೆಯ ಸಂಕೇತವಾಗಿ ಸಾರ್ವ
ಜನಿಕರು ಸಮಿತಿ ರಚಿಸಿಕೊಂಡು ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವುದು
ಸಮಯೋಚಿತವಾಗಿದೆ. ಶ್ರೀ ಸ್ವಾಮೀಜಿಯವರ ಉತ್ತಮ ಮಾರ್ಗದರ್ಶನದಲ್ಲಿ ಈ ಆಸ್ಪ
ತ್ರೆಯು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದುವುದರಲ್ಲಿ ಯಾವ ಸಂಶಯವೂ
ಇಲ್ಲ. ಶ್ರೀ ಸ್ವಾಮೀಜಿಯವರ ಅಸದೃಶಕ್ರಿಯಾಶೀಲ ವ್ಯಕ್ತಿತ್ವವು ಸಮಾಜದಲ್ಲಿನ
ನೈತಿಕ ಮಟ್ಟವನ್ನು ಹೆಚ್ಚಿಸಲೆಂದು ಆಶಿಸುತ್ತೇನೆ. ಪೂಜ್ಯರ ದರ್ಶನ ಆಶೀರ್ವಾದ
ಮತ್ತು ಸಾರ್ವಜನಿಕ ಸೇವೆ ಬಹು ದಿನದವರೆಗೆ ಮುಂದುವರಿಯಲೆಂದು ಭಗವಂತನಲ್ಲಿ
ಪ್ರಾರ್ಥಿಸಿ ನಿಮ್ಮೆಲ್ಲರಿಗೂ ವಂದಿಸಿ ಮುಕ್ತಾಯ ಮಾಡುತ್ತಿದ್ದೇನೆ. ಜೈಹಿಂದ್

ಮೇ 24 ರಂದು ತಮ್ಮ ಕ್ಷೇತ್ರದಲ್ಲಿ ನಡೆದ ಆಸ್ಪತ್ರೆಯ ಶಿಲಾನ್ಯಾಸ
ವನ್ನು ರಾಷ್ಟ್ರಪತಿಗಳಾದ ಡಾ|| ಸಂಜೀವರೆಡ್ಡಿಯವರ ಅಮೃತ ಹಸ್ತ
ದಿಂದ ನೆರವೇರಿಸಿದಿರಿ. ಈ ಸಂದರ್ಭದಲ್ಲಿ ತಮ್ಮ ನೇತೃತ್ವದಲ್ಲಿ ಅವ
ರಿಗೆ ಅಭೂತಪೂರ್ವ ಸ್ವಾಗತವನ್ನು ನೀಡಿದಿರಿ. ಈ ಸಭೆಗೆ ಬಂದ
ಹತ್ತಾರು ಸಾವಿರಮಂದಿ ಮತ್ತು ತಾವು ಮಾಡಿದ ಆಕರ್ಷಕ ವ್ಯವಸ್ಥೆ
ನೋಡಿ ರಾಷ್ಟ್ರಪತಿಗಳು ಪುಲಕಿತರಾದರು. ನಿಮ್ಮ ಶಿಷ್ಯಕೋಟಿ
ತಮ್ಮಲ್ಲಿ ಇಟ್ಟಿರುವ ಅಚಲ ಭಕ್ತಿ, ಶ್ರದ್ಧೆ, ಪ್ರೀತಿ ಮತ್ತು ವಿಶ್ವಾಸ
ಗಳನ್ನು ರಾಷ್ಟ್ರಪತಿಗಳು ಪ್ರತ್ಯಕ್ಷ ನೋಡಿ ಅವರಿಗೆ ಹಿಡಿಸಲಾರದಷ್ಟು
ಸಂತೋಷವಾಯಿತು. ತಾವು ಸಮಾಜಕ್ಕೆ ಮಾಡುತ್ತಿರುವ ಸೇವೆ
ಎಂಥವರಿಗೂ ಆಶ್ಚರ್ಯವನ್ನುಂಟುಮಾಡುವಂತಹುದು. ತಮ್ಮ ವಿಶಾಲ
ಮನೋಭಾವದಿಂದ ಅನೇಕ ಜಗದ್ಗುರುಗಳನ್ನು ಈ ಸಮಾರಂಭಕ್ಕೆ
ಆಹ್ವಾನಿಸಿದ್ದಿರಿ. ಅದು ತಮ್ಮ ಔದಾರ್ಯವನ್ನು ತೋರಿಸುತ್ತದೆ.
ತಮ್ಮ ನಿಷ್ಕಾಮ ಕರ್ಮಯೋಗವನ್ನು ಇದೇ ರೀತಿ ಮುಂದುವರಿಸಲು
ತಮಗೆ ದೇವರು ಆಯುರಾರೋಗ್ಯಸಂಪತ್ತುಗಳನ್ನು ಕೊಡಲೆಂದು
ಪ್ರಾರ್ಥಿಸುತ್ತೇನೆ.

29-4-1982
ಹೊಸ ದೆಹಲಿ

ಇತಿ ತಮ್ಮವ
**ವೀರೇಂದ್ರ ಪಾಟೀಲ್**
ಸಾರಿಗೆ ಮತ್ತು ನೌಕಾಯಾನ ಸಚಿವ



# ಶ್ರೀ ಶ್ರೀಗಳವರ ಆಶೀರ್ವಚನದ ಸಾರಾಂಶ

ಶ್ರೀ ಕ್ಷೇತ್ರದ ಅಧಿಕಾರವನ್ನು ವಹಿಸಿಕೊಂಡು ಕಳೆದ 50 ವರ್ಷಗಳಿಂದ ಆಗಿರುವ
ಕಿಂಚಿತ್ ಸೇವೆಯನ್ನೇ ಬೃಹತ್ತಾಗಿ ಪರಿಗಣಿಸಿ ಹಲವರು ಮಾತನಾಡಿದ್ದಾರೆ. ಈ
ವೇದಿಕೆ ಹೊಗಳಿಕೆ, ಪ್ರಶಂಸೆಗೆ ಗುರಿಯಾಗಬಾರದು. ನಮ್ಮ ಗುರುಗಳ ಆಶೀರ್ವಾದ
ದಿಂದ ಇದುವರೆಗೂ ಆಗಿರುವ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿ, ನಾಡಿನ ಭಕ್ತರು
ಈ ಸಮಾರಂಭವನ್ನು ಏರ್ಪಾಟು ಮಾಡಿದ್ದಾರೆ. ಅದು ಸಂತೋಷವನ್ನು ತಂದಿದೆ.
ಈ ವೇದಿಕೆ ಕೇವಲ ಹೊಗಳಿಕೆಗೆ ಪರ್ಯಾವಸಾನವಾಗದೆ ಸೇವೆ ಸಲ್ಲಿಸಿದವರಿಗೆ ತೃಪ್ತಿ
ಯನ್ನು ತಂದಿದೆ. ಅದಲ್ಲದೆ ಹೆಚ್ಚಿನ ರೀತಿಯಲ್ಲಿ ಉತ್ಸಾಹದಿಂದ ಕಾರ್ಯ ನಿರ್ವಹಿಸಲು
ಸಹಾಯಕವಾಗಬೇಕು. ಈ ವ್ಯವಸ್ಥೆ ಗೊಂಡಿರುವ ಈ ಬೃಹತ್ ಸಮಾರಂಭವನ್ನು
ನೋಡಿದರೆ ಈ ಸಂಸ್ಥೆಯ ಮೇಲೆ ನಾಡಿನ ಜನತೆ ಇಟ್ಟಿರುವ ಪ್ರೀತಿ ವಿಶ್ವಾಸಗಳನ್ನು
ವ್ಯಕ್ತಪಡಿಸುತ್ತದೆ. ಎಲ್ಲರ ಸಹಕಾರ ಸಹಾಯ ಇದೇ ರೀತಿ ಇನ್ನು ಮುಂದೆಯೂ ಈ
ಸಂಸ್ಥೆಗೆ ದೊರಕಲೆಂದು ಆಶಿಸಲಾಗಿದೆ.

ಮಾನ್ಯ ಮುಖ್ಯ ಮಂತ್ರಿಗಳವರು ಮಾತನಾಡುತ್ತಾ ಒಂದು ಮುಖ್ಯ ಆಶ್ವಾಸನೆಯನ್ನು
ಕೊಟ್ಟಿದ್ದಾರೆ. ಮಠಗಳು, ಧರ್ಮ ಸಂಸ್ಥೆಗಳು ಉಳಿಯಬೇಕು, ಬೆಳೆಯಬೇಕು ಅವು
ಗಳ ಸೇವೆ ಜನತೆಗೆ ಬೇಕು, ಅದನ್ನು ಸರ್ಕಾರ ಸ್ವಾಗತಿಸುತ್ತಿದೆ. ಅವುಗಳ ಸಾರ್ವ
ಜನಿಕ ಸೇವೆಯಲ್ಲಿ ಸರ್ಕಾರವೆಂದಿಗೂ ಕೈಹಾಕುವುದಿಲ್ಲ ಎಂಧಿದ್ದಾರೆ. ಈ ಮಾತು
ನಮ್ಮ ಭವ್ಯ ಭರತಖಂಡದ ಇತಿಹಾಸವನ್ನು ಅಧ್ಯಯನ ಮಾಡದವರಿಗೆ ಹೊಸದೇನಲ್ಲ.
ನಮ್ಮ ಭರತಖಂಡದ ಸಂಸ್ಕೃತಿ ಹಾಗೂ ನಾಗರೀಕತೆಗಳು ಅತ್ಯುತ್ಕೃಷ್ಟವಾದವುಗಳು.
ಭಾರತ ಜಗತ್ತಿನಲ್ಲಿ ಗಣ್ಯ ರಾಷ್ಟ್ರವಾಗಲು ನಮ್ಮ ಪ್ರಾಚೀನ ಸಂತರ ಆಧ್ಯಾತ್ಮಿಕ
ಕೊಡುಗೆಯೇ ಕಾರಣ. ಆಧ್ಯಾತ್ಮಿಕತೆ, ಲೌಕಿಕವನ್ನು ಉದಾಸೀನ ಮಾಡಬೇಕೆಂದಿಲ್ಲ.
ಜೀವನ ಸಮಗ್ರತೆಯ ವ್ಯವಸ್ಥೆಯ ಶೋಧನೆಯ ಗುರಿ ಅದಕ್ಕಿದೆ. ಆಧ್ಯಾತ್ಮಿಕ ವ್ಯಕ್ತಿ
ಗಳು ಲೌಕಿಕವನ್ನು ಪ್ರಧಾನವಾಗಿ ಗಣಿಸಬೇಕಿಲ್ಲವಾದರೂ ಉದಾಸೀನ ಮಾಡ
ಬಾರದು. ಜಗತ್ತಿನ ಹಲವು ರಾಷ್ಟ್ರಗಳು ನಾಗರೀಕತೆಯ ಸೋಂಕು ಇಲ್ಲದಿದ್ದಾಗ,
ನಮ್ಮ ಭಾರತೀಯರು ಆಧ್ಯಾತ್ಮಿಕತೆಯ ತಳಹದಿಯ ಮೇಲೆ ನಿಂತ ನಾಗರೀಕತೆ ಮತ್ತು
ಸಂಸ್ಕೃತಿಗಳ ಔನ್ನತ್ಯ ತಲುಪಿದ್ದರು. ಮತ್ತು ಸುಸಂಸ್ಕೃತ ಬಾಳನ್ನು ನಡೆಸುತ್ತಿದ್ದರು.
ಜೊತೆಗೆ ಇಡೀ ವಿಶ್ವದ ಜನತೆಯ ಕಲ್ಯಾಣವನ್ನು ಬಯಸುತ್ತಿದ್ದರು. ಮಾನವ
ಮಾನವನಾಗಿ ಬಾಳ್ವಿಕೆ ಮಾಡುವ ಕಲೆಯನ್ನು ಕಲಿತು ಇತರರಿಗೆ ಬೋಧಿಸಿದರು.
ಈ ರೀತಿಯ ವಿಶೇಷದ ಹಿನ್ನೆಲೆಯಲ್ಲಿ ನಮ್ಮ ದೇಶದ ಮಠಗಳು ಧಾರ್ಮಿಕ ಸಂಸ್ಥೆಗಳೂ

ಮಹತ್ತರ ಪಾತ್ರವನ್ನು ವಹಿಸಿವೆ. ನಮ್ಮ ರಾಷ್ಟ್ರದ ಈ ರೀತಿಯಾದ ಘನತೆ ಗೌರವಕ್ಕೆ ಸಹಸ್ರಾರು ಸಂತರ, ಮಹಾಪುರುಷರ ಸಾಧನೆ ಸಿದ್ಧಿ ಆಶೀರ್ವಾದಗಳೇ ಮುಖ್ಯ ಕಾರಣ. ಇಂದು ಧಾರ್ಮಿಕ ಸಂಸ್ಥೆಗಳ ಬಗ್ಗೆ ತಪ್ಪುಕಲ್ಪನೆ ಬೆಳೆದಿದೆ. ನಮ್ಮ ಮಠ ಮಾನ್ಯಗಳು ಹಿಂದಿನ ಪರಂಪರೆಯನ್ನು ಉಳಿಸಿಕೊಂಡು ಬರುವುದರಲ್ಲಿ ಶ್ರಮವಹಿಸ ಬೇಕು. ಅರವಿಂದರು ಒಂದುಕಡೆ ಹೇಳಿದ್ದಾರೆ "ಆಧ್ಯಾತ್ಮಿಕ ಹಿನ್ನೆಲೆ ಇಲ್ಲದ ಜೀವನ ಪರಿಪೂರ್ಣ ಜೀವನವಾಗಲಾರದು" ಎಂದಿದ್ದಾರೆ. ಇಂದು ಅನೇಕ ಧರ್ಮಸಂಸ್ಥೆಗಳು ಸಮಾಜಕ್ಕೆ ಆಧ್ಯಾತ್ಮಿಕ ಸಂಪತ್ತನ್ನು ನೀಡಲು ಸಂಕಲ್ಪಮಾಡಿವೆ. ನಮ್ಮ ಪೂಜ್ಯ ಗುರುಗಳು 1917ನೆಯ ಇಸ್ವಿಯಲ್ಲಿಯೇ ವಿದ್ಯಾ ಸಂಸ್ಥೆಯನ್ನು ಸ್ಥಾಪಿಸಿ ಮಾರ್ಗ ತೋರಿಸಿದ್ದಾರೆ. ಎಲ್ಲ ಸಮಾಜದ ಸೇವೆ ಮಾಡಿದ್ದಾರೆ, ಪರಮಾತ್ಮನ ಕೃಪೆ ದೊಡ್ಡದು. ನಮ್ಮ ಪೂಜ್ಯ ಗುರುಗಳ ಆಶೀರ್ವಾದ, ನಿಮ್ಮೆಲ್ಲರ ಸಹಕಾರದಿಂದ ಈ ಸಂಸ್ಥೆ ಈ ಪ್ರಮಾಣದ ಸೇವೆಸಲ್ಲಿಸಲು ಸಾಧ್ಯವಾಯಿತು.

ರಾಷ್ಟ್ರದ ನಾಯಕರಾದ ಶ್ರೀ ನೀಲಂ ಸಂಜೀವರೆಡ್ಡಿಯವರಿಂದ ಆಸ್ಪತ್ರೆಯ ಶಂಕು ಸ್ಥಾಪನಾ ಮಹೋತ್ಸವ ಇಂದು ನೆರವೇರಲಿದೆ. ಈ ಆಸ್ಪತ್ರೆಯು ನಾಡಿನ ಜನತೆಯ ರೋಗರುಜಿನ ಪರಿಹಾರದ ಮಹತ್ತರ ಸೇವೆಸಲ್ಲಿಸಲೆಂದು ಉದ್ದೇಶಿಸಲಾಗಿದೆ. ಮಹಾ ಜನಗಳು ವಿಶೇಷ ಆಶ್ವಾಸನೆ ಕೊಟ್ಟಿದ್ದಾರೆ. ಕ್ಷಿಪ್ರವಾಗಿ ಈಡೇರಲು ಮಹಾಜನಗಳ ನೆರವು ಅತ್ಯಗತ್ಯ. ಈ ಸಂಸ್ಥೆಯು ನಾಡಿನ ಜನತೆಯ ಮಹತ್ತರ ಸೇವೆಸಲ್ಲಿಸುವಲ್ಲಿ ಎರಡು ಮಾತೇ ಇಲ್ಲ. ಈ ಪುಣ್ಯ ಕಾರ್ಯಕ್ಕೆ ರಾಷ್ಟ್ರಪತಿಗಳು ಬಿಡುವು ಮಾಡಿ ಕೊಂಡು ಈ ಸಮಾರಂಭವನ್ನು ಯಶಸ್ವಿಯಾಗಿ ನಡೆಸಿಕೊಟ್ಟಿರುವುದು ತುಂಬಾ ಸಂತೋಷವನ್ನುಂಟುಮಾಡಿದೆ.

ಮಾನ್ಯ ಗುಂಡೂರಾಯರು ತರುಣರು, ಧರ್ಮಾಭಿಮಾನವುಳ್ಳವರೂ, ದಕ್ಷ ಆಡಳಿತ ಗಾರರೂ ತಮ್ಮ ಹೊಸ ಹುರುಪು ಉತ್ಸಾಹಗಳಿಂದ ನಾಡಿನ ಅಭಿವೃದ್ಧಿಗೆ ಶ್ರಮಿಸು ತ್ತಿದ್ದಾರೆ. ಅವರ ಧರ್ಮಶ್ರದ್ಧೆ ಇತೋಪ್ಯತಿಶಯವಾಗಿ ಧರ್ಮಸಂಸ್ಥೆಗಳ ಮೇಲೆ ಉಳಿದು ಬರಲೆಂದು ಆಶಿಸಲಾಗಿದೆ. ಇಂದು ರಾಷ್ಟ್ರದ ದೊಡ್ಡವರು ಹಾಕಿದ ಈ ಅಸ್ತಿಭಾರ ಶೀಘ್ರವಾಗಿ ನೆರವೇರುವುದರಲ್ಲಿ ಸಂದೇಹವಿಲ್ಲ. ನಮ್ಮ ಗುರುಗಳ ಆಶೀರ್ವಾದ, ನಾಡಿನ ಭಕ್ತರ ಉದಾರ ಸಹಾಯ ಸಹಕಾರ ದೊರೆತಿರುವುದು ಆಸ್ಪತ್ರೆ ಶೀಘ್ರ ನಿರ್ಮಾಣಕ್ಕೆ ಸ್ಫೂರ್ತಿನೀಡಿದಂತಾಗಿದೆ. ಇಷ್ಟು ಹೇಳಿ ಪರಮಾತ್ಮನು ಎಲ್ಲರಿಗೂ ಮಂಗಳವನ್ನುಂಟುಮಾಡಲೆಂದು ಕೋರಿ ಮುಕ್ತಾಯ ಮಾಡುತ್ತೇನೆ. ●

---

ಮನುಷ್ಯನು ಇನ್ನೂ ಗರ್ಭದಲ್ಲಿದ್ದಾಗಲೇ ಅವನ ಆಯಸ್ಸು, ಕೆಲಸ, ಹಣ, ವಿದ್ಯೆ, ಮರಣ ಇವು ಐದೂಕೂಡ ನಿಶ್ಚಯಿಸಲ್ಪಟ್ಟಿರುತ್ತವೆ.

—ಹಿತೋಪದೇಶ



## ಆಸ್ಪತ್ರೆಯ ಶಂಕುಸ್ಥಾಪನೆಯನ್ನು ನೆರವೇರಿಸಿಕೊಟ್ಟ ಘನತೆವೆತ್ತ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿಯವರು ಮಾಡಿದ ಭಾಷಣ

ಪರಮ ಪೂಜ್ಯ ಶ್ರೀ ಶ್ರೀ ಸ್ವಾಮೀಜಿಯವರು ತಮ್ಮ ತ್ಯಾಗ ಮತ್ತು ಸಮರ್ಪಣಾ ಭಾವದಿಂದ ಸಮಾಜಕ್ಕೆ ಸಲ್ಲಿಸಿದ ಸೇವೆಯ ನೆನಪಿಗಾಗಿ ನಿರ್ಮಿಸಲು ಉದ್ದೇಶಿಸಿರುವ 'ಶ್ರೀ ಶ್ರೀ ಡಾ॥ ಶಿವಕುಮಾರ ಸ್ವಾಮೀಜಿ ಆಸ್ಪತ್ರೆ'ಯ ಶಂಕುಸ್ಥಾಪನಾ ಕಾರ್ಯವನ್ನು ನೆರವೇರಿಸಲು ನನಗೆ ಅಪಾರ ಸಂತಸ ಉಂಟಾಗಿದೆ.



ನಾವಿಂದು ಪರಿವರ್ತನೀಯ ಯುಗದಲ್ಲಿ ಜೀವಿಸುತ್ತಿದ್ದೇವೆ. ವಿಜ್ಞಾನ, ತಂತ್ರಜ್ಞಾನ ಮತ್ತು ಆರ್ಥಿಕ ಯೋಜನೆಗಳ ಅನ್ವಯದಿಂದ ಭೋಗಜೀವನದ ಸಂಪತ್ತು ತ್ವರಿತಗತಿಯಲ್ಲಿ ಪ್ರಗತಿಗೊಂಡರೂ, ಮಾನವ ಜೀವನದ ಮೂಲಭೂತ ಸಮಸ್ಯೆಗಳು ಮಾತ್ರ ಇನ್ನೂ ಜೀವಂತವಾಗಿಯೇ ಉಳಿದಿವೆ. ಈ ತೆರನಾದ ಯಾಂತ್ರಿಕ ಪ್ರಗತಿ ನಮ್ಮ ಜೀವನದ ಅನೇಕ ಸಮಸ್ಯೆಗಳನ್ನು ನಿವಾರಿಸುವುದಕ್ಕೆ ಬದಲಾಗಿ, ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಅವುಗಳ ಸಂಖ್ಯೆಯನ್ನು ಹೆಚ್ಚಿಸಿದೆ. ಅಸಹಕಾರ, ಅಶಾಂತಿ, ಅಜ್ಞಾನ, ಅನಾರೋಗ್ಯ ಮತ್ತು ಬಡತನಗಳಂತಹ ಸಮಸ್ಯೆಗಳು ಇಂದಿಗೂ ನಮ್ಮ ಪ್ರಗತಿಗೆ ಸವಾಲಾಗಿ ನಿಂತಿವೆ.

ಇಂತಹ ಪರಿಸ್ಥಿತಿಯಲ್ಲಿ ನಮ್ಮ ಪೂರ್ವಿಕರು ನಮಗೆ ಬಿಟ್ಟುಹೋಗಿರುವ ಆಧ್ಯಾತ್ಮಿಕ ಜ್ಞಾನದ ಅರಿವು ನಮಗೆ ಅನಿವಾರ್ಯವಾಗಿದೆ. ಮಾನವ ಜೀವದ ಪರಮ ಗುರಿಯಾದ

ಆತ್ಮ ಸಾಕ್ಷಾತ್ಕಾರವನ್ನು ಹೊಂದಲು ಅಗತ್ಯವಾದ ಆಚಾರ ಮತ್ತು ವಿಚಾರ ಕ್ರಮ ವನ್ನು ಸಂಶೋಧಿಸಿದಂತಹ ಅನೇಕ ಸಂತರು, ಋಷಿಗಳು ಮತ್ತು ದಾರ್ಶನಿಕರನ್ನು ಈ ನಮ್ಮ ಪವಿತ್ರ ಭಾರತ ಕೊಟ್ಟಿದೆ. ಅಂತಹ ಮಹಾತ್ಮರ ಆಚಾರ-ವಿಚಾರಗಳು ತೋರಿಕೆಗೆ ಭಿನ್ನ ಭಿನ್ನವಾಗಿ ಕಂಡುಬಂದರೂ, ಆಂತರಿಕವಾಗಿ ಮಾನವ ಭ್ರಾತೃತ್ವ ಮತ್ತು ಆತ್ಮ ಸಾಕ್ಷಾತ್ಕಾರದಂತಹ ಉನ್ನತ ಮೌಲ್ಯಗಳನ್ನು ಸಾಧಿಸುವುದೇ ಅವುಗಳ ಧ್ಯೇಯವಾಗಿದೆ.

ಇತಿಹಾಸದುದ್ದಕ್ಕೂ ತಂತ್ರಜ್ಞರು, ಜ್ಞಾನಿಗಳು ಮತ್ತು ಸುಧಾರಕರು ಜನಿಸಿ, ತಮ್ಮ ದರ್ಶನ ಮತ್ತು ಆಚಾರಗಳ ಮೂಲಕ ಆತ್ಮ ಸಾಕ್ಷಾತ್ಕಾರಕ್ಕೆ ಮಾನವ ಜೀವನವನ್ನು ಅಲ್ಲಗಳೆಯುವುದಾಗಲೀ ಅಥವಾ ಅದರಿಂದ ವಿಮುಖವಾಗುವುದಾಗಲೀ ಅಲ್ಲವೆಂಬು ದನ್ನು ತೋರಿಸಿಕೊಟ್ಟಿದ್ದಾರೆ. ಅಂಥಹ ಮಹಾತ್ಮರ ಜೀವನಕ್ರಮವನ್ನು ಹೇಗೆ ನಾವು ಜೀವನಕ್ಕೆ ಅಳವಡಿಸಿಕ್ಕೊಂಡು ಜೀವನದ ಪರಮಾರ್ಥವನ್ನು ಸಾಧಿಸಬಹುದೆಂಬುದನ್ನು ನಮ್ಮ ಧರ್ಮಸಂಸ್ಥೆಗಳು ಮಾರ್ಗದರ್ಶನ ನೀಡಬೇಕಾಗಿದೆ. ಅಂತಹ ಧರ್ಮಸಂಸ್ಥೆ ಗಳು ಇನ್ನೂ ನಮ್ಮ ಸಮಾಜದಲ್ಲಿ ಉಳಿದಿರುವುದು ನಮ್ಮ ಅದೃಷ್ಟವೇ ಸರಿ.




ಬದಲಾಯಿಸುತ್ತಿರುವ ಸಮಕಾಲೀನ ಯುಗದಲ್ಲಿಯೂ ನಮ್ಮ ಪ್ರಾಚೀನ ಜ್ಞಾನ ಸಂಪತ್ತನ್ನು ಸಮಾಜದ ಮೇಲ್ಮೆಗಾಗಿ ಹೇಗೆ ಅಳವಡಿಸಿ, ಆಚಾರಕ್ಕೆ ತರಬಹುದೆಂಬು



ದನ್ನು ಶ್ರೀ ಸಿದ್ಧಗಂಗಾ ಮಠದ ಶ್ರೀ ಶ್ರೀ ಶಿವಕುಮಾರ ಸ್ವಾಮಿಯವರಲ್ಲಿ ನಾವು ಕಾಣ ಬಹುದಾಗಿದೆ. ಈ ಮಠವು ತನ್ನದೇ ಆದ ಶಿವಯೋಗಿಗಳ, ಸಿದ್ಧಪುರುಷರ ಭವ್ಯ ಪರಂಪರೆಯನ್ನು ಹೊಂದಿದೆ. ಅಂತಹ ದೈವೀ ಪುರುಷರ ಸಾಲಿಗೆ ಸೇರಿದ ಶ್ರೀ ಶ್ರೀ ಸ್ವಾಮೀಜಿಯವರು ಶ್ರೀಮಠವನ್ನು ಆಧ್ಯಾತ್ಮಿಕ ಸಾಧನೆಯ ಕೇಂದ್ರವಾಗಿ ಬೆಳಸಿರುವುದೇ ಅಲ್ಲದೆ, ಸಾಮಾಜಿಕ ಸೇವೆಯ ಬೃಹತ್ ಸಂಸ್ಥೆಯಾಗಿಯೂ ವಿಸ್ತರಿಸಿದ್ದಾರೆ.

ಶ್ರೀಮಠದ ವತಿಯಿಂದ ನಡೆಯುತ್ತಿರುವ ಸಂಸ್ಥೆಗಳ ಸಂಖ್ಯೆ ಮತ್ತು ಅವುಗಳಿಂದ ಜನ ಸಾಮಾನ್ಯರಿಗಾಗುತ್ತಿರುವ ಪ್ರಯೋಜನ ಶ್ಲಾಘನೀಯವೇ ಸರಿ. ಆದರೆ ಇದಕ್ಕೂ ಮಿಗಿಲಾಗಿ ಸಕಲ ಜೀವರಿಗೆ ಲೇಸನ್ನೇ ಬಯಸುವ ಶ್ರೀ ಸ್ವಾಮೀಜಿಯವರ ಧಾರ್ಮಿಕ ದೃಷ್ಟಿ ಮತ್ತು ಸಮಾಜದ ಶ್ರೇಯಸ್ಸನ್ನೇ ಗುರಿಯಾಗಿಟ್ಟುಕೊಂಡು ಎಲ್ಲಾ ಧರ್ಮದ, ಜಾತಿಯ ಮತ್ತು ಪಂಥದ ಜನರಿಗೂ ಸಮತಾಭಾವದಿಂದ ಅವರು ಮಾಡುತ್ತಿರುವ ಸಮಾಜದ ಸೇವೆ ನನ್ನ ಮನಸ್ಸಿಗೆ ಅತ್ಯಂತ ಸಂತೋಷವನ್ನುಂಟುಮಾಡಿದೆ. ಪೂಜ್ಯ ಸ್ವಾಮೀಜಿಯವರು ಯಾವ ಮಠದ ಉತ್ತರಾಧಿಕಾರಿಯಾಗಿ ದೀಕ್ಷಾಬದ್ಧರಾದರೋ ಆ ಮಠದ ಸೇವಾ ವ್ಯಾಪ್ತಿಯನ್ನು ಕೇವಲ ಒಂದು ಮತಕ್ಕೆ ಅಥವಾ ಒಂದು ಪಂಥಕ್ಕೋ ಸೀಮೀತಗೊಳಿಸಬಹುದಾಗಿತ್ತು. ಆದರೆ ಅವರ ಆಳವಾದ ಚಿಂತನೆ ಮತ್ತು ದೃಷ್ಟಿ ವೈಶಾಲ್ಯತೆಗಳಿಂದ ಸಕಲ ಜನಹಿತಕ್ಕಾಗಿ ದುಡಿಯುವ ತತ್ವನಿಷ್ಠರಾಗಿದ್ದಾರೆ. ದೇಶ ಇಂದು ಕೋಮು ಮತ್ತು ಪ್ರತ್ಯೇಕತಾಭಾವಗಳಿಂದ ತುಂಬಿತುಳುಕುತ್ತಿರುವಾಗ, ಪೂಜ್ಯ ಸ್ವಾಮೀಜಿಯವರ ಸೇವೆಯನ್ನು ಮೀರಿ ನಿಲ್ಲುವಂಥ ಅಮೋಘವಾದ ಕಾರ್ಯ ಬೇರೊಂದಿಲ್ಲ.

ಪೂಜ್ಯ ಸ್ವಾಮೀಜಿಯವರ ನೇತೃತ್ವದಲ್ಲಿ ಉನ್ನತ ಗುಣಮಟ್ಟದ ತಾಂತ್ರಿಕ ಕಾಲೇಜ್ ಮತ್ತು ಬೃಹತ್ ಪ್ರಮಾಣದ ಸಂಸ್ಕೃತ ಕಾಲೇಜುಗಳೇ ಅಲ್ಲದೆ ನರ್ಸರಿ ಶಾಲೆಯಿಂದ ಹಿಡಿದು ಪದವೀಪೂರ್ವ ಕಾಲೇಜುಗಳೂ ವಿದ್ಯಾಸೇವೆಯನ್ನು ಸಲ್ಲಿಸುತ್ತಿರುವುದನ್ನು ತಿಳಿದು ನನಗೆ ತುಂಬಾ ಸಂತೋಷವಾಗಿದೆ. ಇಷ್ಟೇ ಅಲ್ಲದೆ, ದೇಶದ ಬೇರೆ ಬೇರೆ ಪ್ರಾಂತ್ಯಗಳಿಗೆ ಸೇರಿದ ವಿವಿಧ ಕೋಮಿನ ಸುಮಾರು 3000ಕ್ಕೂ ಹೆಚ್ಚಿನ ವಿದ್ಯಾರ್ಥಿ ಗಳಿಗೆ ಉಚಿತ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿ ಅನ್ನದಾನ ಮಾಡುತ್ತಿರುವುದೂ ಸಂತಸದ ವಿಷಯ. ಈ ಸಂದರ್ಭದಲ್ಲಿ ಆಚರಿಸುತ್ತಿರುವ ಉಚಿತ ವಿದ್ಯಾರ್ಥಿ ನಿಲಯ ಮತ್ತು ಸಂಸ್ಕೃತ ಕಾಲೇಜುಗಳ ವಜ್ರ ಮಹೋತ್ಸವ ಪೂಜ್ಯ ಸ್ವಾಮೀಜಿಯವರ ಆಡಳಿತ ದಕ್ಷತೆ ಮತ್ತು ಶಿಕ್ಷಣದ ಬಗ್ಗೆ ಅವರಿಗಿರುವ ತ್ಯಾಗ ಮತ್ತು ದೂರದೃಷ್ಟಿಗೆ ಜೀವಂತ ಸಾಕ್ಷಿಯಾಗಿವೆ. ಶಿಕ್ಷಣ ಕ್ಷೇತ್ರದಲ್ಲಿ ನಾವಿಂದು ಗುಣಮಟ್ಟದ ಇಳಿಕೆ, ವಿದ್ಯಾರ್ಥಿಗಳಲ್ಲಿ ಅಶಿಸ್ತು, ಉಪಾಧ್ಯಾಯ ವೃಂದದಲ್ಲಿ ಅತೃಪ್ತಿ ಮತ್ತು ಮತೀಯ ವಿದ್ಯಾಸಂಸ್ಥೆಗಳ ಉದಯಗಳಂತಹ ಅನೇಕ ಸಮಸ್ಯೆಗಳನ್ನು ಕಾಣುತ್ತಿದ್ದೇವೆ. ಇಂಥಹ

ದಿವಸಗಳಲ್ಲೂ ಶಿಕ್ಷಣದ ಉದಾತ್ತ ಗುರಿಸಾಧನೆಗಾಗಿ ಶ್ರಮವಹಿಸಿ ತೃಪ್ತಿಕರವಾಗಿ ಸೇವೆಸಲ್ಲಿಸುತ್ತಿರುವ ಶ್ರೀ ಕ್ಷೇತ್ರದ ವಿದ್ಯಾ ಸಂಸ್ಥೆಗಳು ಇತರೇ ಸಂಸ್ಥೆಗಳಿಗೆ ಆದರ್ಶವಾಗಲೆಂದು ಹಾರೈಸುತ್ತೇನೆ.

ನಾನಿಂದು ನೆರವೇರಿಸುತ್ತಿರುವ ಈ ಆಸ್ಪತ್ರೆಯ ಶಂಕುಸ್ಥಾಪನಾ ಕಾರ್ಯ ಒಂದು ಮಹೋನ್ನತ ಘಟಕ. ದೀನ, ದುರ್ಬಲ ಜನರ ನೋವನ್ನು ಕಳೆದು ಅವರ ಉದ್ಧಾರವನ್ನೇ ತಮ್ಮ ಜೀವನದ ಗುರಿಯಾಗಿ ಇಟ್ಟುಕೊಂಡಿರುವ ಪೂಜ್ಯ ಸ್ವಾಮೀಜಿಯವರ ಸಾರ್ಥಕ ಸೇವೆಯ ನೆನಪಿಗಾಗಿ, ಭಕ್ತವೃಂದವು ಈ ಆಸ್ಪತ್ರೆಯ ನಿರ್ಮಾಣಕ್ಕೆ ಮುಂದೆ ಬಂದಿರುವುದು ತುಂಬಾ ಸಂತಸದ ವಿಷಯ. ಇದು ಗ್ರಾಮೀಣ ಜನತೆಗೆ ಜ್ಞಾನದಾನದ ಜೊತೆಗೆ ಅವರ ಆರೋಗ್ಯ ಸುಧಾರಣೆಗೂ ಅನುಕೂಲವಾಗುವುದೆಂದು ನಂಬಿದ್ದೇನೆ. ಶ್ರೀಮಠದ ವಿದ್ಯಾಸಂಸ್ಥೆಗಳಂತೆಯೇ, ಇಂದು ನಿರ್ಮಿಸಲು ಯೋಜಿಸಿರುವ ಆಸ್ಪತ್ರೆಯೂ ಕೂಡ ಕರ್ನಾಟಕದ ಬೇರೆ ಬೇರೆ ಸ್ಥಳಗಳಲ್ಲಿ ತನ್ನ ಸೇವಾ ಕೇಂದ್ರಗಳನ್ನು ತೆರೆದು ನಾಡಿನ ಜನತೆಗೆ ತನ್ನ ಸೇವೆ ದೊರೆಯುವಂತೆ ಬೆಳೆಯಲೆಂದು ಆಶಿಸುತ್ತೇನೆ.

ಇನ್ನೊಂದು ಅತ್ಯಂತ ಸಂತೋಷದ ಅಂಶವೆಂದರೆ ಇಲ್ಲಿ ನಡೆಯುತ್ತಿರುವ 'ದಾಸೋಹ' ಶ್ರೀಮಠದಲ್ಲಿ ಇಂದಿಗೆ ನೂರು ವರ್ಷಗಳ ಹಿಂದೆ ಅನ್ನದಾನಕ್ಕಾಗಿ ಹತ್ತಿಸಿದ ಬೆಂಕಿ ಇಂದಿಗೂ ಆರದೆ ದಿನೇದಿನೇ ಇನ್ನೂ ಪ್ರಕಾಶಮಾನವಾಗಿ ಬೆಳಗಿ, ದಿನಂಪ್ರತಿ ಮಠಕ್ಕೆ ಬಂದು ಹೋಗುತ್ತಿರುವ ಸಹಸ್ರಾರು ಮಂದಿ ಭಕ್ತರಿಗೂ ಅಲ್ಲದೆ ಪೂಜೆಗಾಗಿ ಮತ್ತು ಶ್ರೀ ಸ್ವಾಮೀಜಿಯವರ ದರ್ಶನಾಕಾಂಕ್ಷಿಯಾಗಿ ಬಂದುಹೋಗುವ ಅನೇಕ ಯಾತ್ರಾರ್ಥಿಗಳಿಗೂ ನಡೆಸುತ್ತಿರುವ ಪ್ರಸಾದ ವಿತರಣೆಯ ಕಾರ್ಯ ನಿಜಕ್ಕೂ ಶ್ಲಾಘನೀಯ. ಇದರ ಜೊತೆಗೆ ವರ್ಷಪ್ರತಿ ಮಹಾ ಶಿವರಾತ್ರಿಯಲ್ಲಿ ನಡೆಯುವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಜಾತ್ರೆಯ ಕಾಲದಲ್ಲಿ 50,000ಕ್ಕೂ ಮಿಕ್ಕ ಜನಕ್ಕೆ ನಡೆಸುವ ಅನ್ನದಾನದ ಸೇವೆಯನ್ನು ನೆನೆದಾಗ, ಈ ಬೃಹತ್ ಸೇವೆಗೆ ಬೇಕಾಗುವ ಆಹಾರ ಸಾಮಗ್ರಿಗಳು, ನೀರಿನ ವ್ಯವಸ್ಥೆಗಳಂತಹ ಕೆಲಸ ಸಾಮಾನ್ಯ ಮಾನವರ ಶಕ್ತಿಗೆ ನಿಲುಕುವ ಕಾರ್ಯವಲ್ಲ. ಈ ಸ್ತುತ್ಯಾರ್ಹ ಕಾರ್ಯ ಜನತೆಯ ಬಗ್ಗೆ ಸ್ವಾಮೀಜಿಯವರಿಗಿರುವ ಪ್ರೇಮ ಮತ್ತು ಅನುಕಂಪಗಳನ್ನು ಎತ್ತಿ ತೋರಿಸುತ್ತದೆ.

ಈ ಪವಿತ್ರ ಕ್ಷೇತ್ರದಲ್ಲಿ ನಡೆದಿರುವ ಅಮೋಘ ಸೇವಾ ಕಾರ್ಯಗಳನ್ನು ಕಂಡು ನಾನು ವಿಸ್ಮಿತನಾಗಿದ್ದೇನೆ. ಉನ್ನತಮಟ್ಟದ ಕರ್ತೃತ್ವ ಶಕ್ತಿ ಮತ್ತು ತ್ಯಾಗಬುದ್ಧಿಯ ಆದರ್ಶ ವ್ಯಕ್ತಿಗಳು, ಸಮಾಜದ ಎಲ್ಲಾ ವರ್ಗದ ಜನರ ಸಹಕಾರಗಳಿಸಿ ಎಂಥಹ ಮಹತ್ಕಾರ್ಯವನ್ನು ಸಾಧಿಸಿ ಸಾಮಾಜಿಕ ಹಿತವನ್ನು ಉಂಟುಮಾಡಬಹುದೆಂಬುದಕ್ಕೆ ಶ್ರೀ ಕ್ಷೇತ್ರವು ಒಂದು ಜೀವಂತ ಸಾಕ್ಷಿಯಾಗಿದೆ. ಇಂದಿನ ಸಾಮಾಜಿಕ ಸಮಸ್ಯೆಗಳನ್ನು ಸರ್ಕಾರವೊಂದೇ ನಿವಾರಿಸಲಾಗುವುದಿಲ್ಲ. ಈ ದಿಸೆಯಲ್ಲಿ ಧರ್ಮಸಂಸ್ಥೆಗಳು, ಖಾಸಗೀ ಸಂಸ್ಥೆಗಳೂ ಸಹ ನಮ್ಮ ಜನರ ಪ್ರಗತಿಗೆ ತಮ್ಮ ತಮ್ಮ ಪಾಲಿನ ಕರ್ತವ್ಯವೇನೆಂಬುದನ್ನು ಅರಿತು ಕ್ರಿಯಾಶೀಲರಾಗಬೇಕಾಗಿದೆ. ನಮ್ಮ ದೇಶಕ್ಕಾಗಿ ನಾವೇನು ಮಾಡಬಹುದೆಂಬುದನ್ನು ನಾವೆಲ್ಲರೂ ಇಂದು ಅರಿಯಬೇಕಾಗಿದೆ.

ಭಗವಾನ್ ಬಸವೇಶ್ವರರ ದಿವ್ಯ ಮಂತ್ರವಾದ "ಕಾಯಕದಿಂದ ಮುಕ್ತಿ" ಶ್ರೀ ಶ್ರೀಮಠದಲ್ಲಿ ಜೀವಂತವಾಗಿ ಬೆಳಗುತ್ತಿರುವುದನ್ನು ಕಾಣಬಹುದು. ನಮ್ಮ ಪಾಲಿನ ಕಾಯಕ ಯಾವುದೇ ಆಗಿರಲಿ, ಅದನ್ನು ಸರ್ವ ಸಮರ್ಪಣಾಭಾವದಿಂದ ನಿರ್ವಹಿಸಿ ಮುಕ್ತಿಯನ್ನು ಸಾಧಿಸಬೇಕೆಂಬುದೇ ಭಗವಾನರ ಮಾತಿನ ಹಿಂದಿರುವ ಅರ್ಥ. ಈ ದಿಸೆಯಲ್ಲಿ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ದರ್ಶನ ಮತ್ತು ಉಪದೇಶ ತಮ್ಮೆಲ್ಲರ ಜೀವನದ ಪರಮಾರ್ಥ ಸಾಧನೆಗೆ ಸಹಾಯಕವಾಗಿವೆ ಎಂದು ನಾನು ನಂಬಿದ್ದೇನೆ.

ಕೊನೆಯದಾಗಿ, ಶ್ರೀ ಶ್ರೀ ಕ್ಷೇತ್ರವು ಸರ್ವಜನ ಶ್ರೇಯಸ್ಸಿಗೆ ಶ್ರಮಿಸುತ್ತಿರುವ ಸೇವಾ ಕಾರ್ಯವನ್ನು ಪ್ರತ್ಯಕ್ಷವಾಗಿ ಕಾಣುವಂಥ ಸದವಕಾಶವನ್ನು ಕಲ್ಪಿಸಿಕೊಟ್ಟ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ಸನ್ನಿಧಿಯಲ್ಲಿ ನನ್ನ ಭಕ್ತಿಪೂರ್ವಕ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಅಂತೆಯೇ ಈ ಮಹೋತ್ಸವದ ವ್ಯವಸ್ಥಾಪಕ ವರ್ಗಕ್ಕೂ ನನ್ನ ಧನ್ಯವಾದಗಳು.

---

ತಮ್ಮ ಪೀಠಾರೋಹಣದ ಬಂಗಾರದ ಹಬ್ಬದ ಕರೆಯೋಲೆ ಕೈಸೇರಿತು. ನಮ್ಮೆಲ್ಲರ ಕಲ್ಪ ಸ್ಫೂರ್ತಿ ಸಂತಸಗಳನ್ನು ಉಕ್ಕೇರಿಸುವ ಪರಮ ಮಂಗಲ ಮಹೂರ್ತ ಇದು. ಸಮಸ್ತ ಸಮಾಜಕ್ಕೆ ಬಂಗಾರದ ಹಬ್ಬ.

ಭಾರತದ ಸಂಸ್ಕೃತಿ ಗಂಗೆಯೊಂದಿಗೆ, ಆಧುನಿಕ ವಿದ್ಯೆತ್ತಿನ ಯಮುನೆ ಹಾಗೂ ಜನಸೇವೆಯ ಸರಸ್ವತಿಯರು ಜೊತೆಗೂಡಿದ ತ್ರಿವೇಣಿ ಸಂಗಮದ ಪಾವಿತ್ರ್ಯವನ್ನು ಚಿತ್ರಿಸುವ ತಮ್ಮ ಋಷಿಸದೃಶ ಬಾಳುವೆ ನಮ್ಮಂತಹ ಸಾಮಾನ್ಯ ಕಾರ್ಯಕರ್ತರಿಗೆಲ್ಲ ಹಿರಿದು ಉಜ್ವಲ ದಾರಿದೀಪ.

ಇಂತಹ ದಿವ್ಯ ಜೀವನದೀಪ ನೂರುಕಾಲ ಬೆಳಗಲಿ, ನೂರುಲಕ್ಷ ಜೀವನಗಳನ್ನು ಬೆಳಗುತ್ತಿರಲಿ, ದೇವಿಭಾರತೀಯ ಗುಡಿಯನ್ನು ಬೆಳೊಸಕಡ ಪೂಜಾಮಂಡಿರವಾಗಿ ಜಗಮಗಿಸುವಂತಹ ಮಹಾಕಾರ್ಯಕ್ಕೆ ಇಂದಿನ ಸುಮುಹೂರ್ತ ಸಮಸ್ತರಿಗೂ ಪ್ರೇರಣೆ ನೀಡಲಿ, ಎಂದು ಪ್ರಭುಚರಣದಲ್ಲಿ ಮನಸಾರ ಬೇಡುವೆ.

— ಹೊ. ವೆ. ಶೇಷಾದ್ರಿ
ರಾಷ್ಟ್ರೀಯ ಸ್ವಯಂಸೇವಕ ಸಂಘ, ಕರ್ನಾಟಕ, 21-4-82

## "ನಿಷ್ಠೆಯಿಂದ ಪೂಜಿಸಿದ ಫಲ"

ಸುವರ್ಣ ಮಹೋತ್ಸವದ ಸಮಾರಂಭದ ಪ್ರಾರಂಭೋತ್ಸವ ಏಪ್ರಿಲ್ 24ರ ಬೆಳಿಗ್ಗೆ 11 ಘಂಟೆಗೆ ನಡೆಯುವುದರಲ್ಲಿತ್ತು. 23ರ ರಾತ್ರಿ ನನಗೆ ಮಾತನಾಡಲು ಗಂಟಲು ಪೂರ್ಣ ಕಟ್ಟಿಹೋಗಿತ್ತು. ಬೆಳಗಾದರೆ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿಯವರಿಂದ ಆಸ್ಪತ್ರೆ ಶಂಕುಸ್ಥಾಪನೆಯ ಸಮಾರಂಭ. ಲಕ್ಷಾಂತರ ಜನಸಮೂಹ, ಪ್ರಾರಂಭೋತ್ಸವದಲ್ಲಿ ಮಾತನಾಡಬೇಕು, ಕಾರ್ಯಕ್ರಮದಲ್ಲಿ ಆಶೀರ್ವಚನ ನೀಡಬೇಕಾಗಿದೆ, ರಾತ್ರಿ ಪೂಜೆ ಮುಗಿಸಿ ಬೆಳಗಾದರೆ ಸರಿಹೋಗಬಹುದೆಂದು ತಿಳಿದು ಮಲಗಿದೆ. ಬೆಳಗಿನ ಜಾವ ಪೂಜೆಗೆ ಹೋದಾಗ ಯಥಾಸ್ಥಿತಿ ಇದೆ. ರಾತ್ರಿಗಿಂತಲೂ ಅಧಿಕವಾಗಿ ಗಂಟಲು ಕಟ್ಟಿಬಂದಿದೆ. ಸ್ನಾನ ಮುಗಿಸಿ ಪೂಜೆಗೆ ಹೋದೆ. ಪೂಜೆ ಮಾಡುತ್ತಾ ದಯಾಮಯನಾದ ಪರಮಾತ್ಮನನ್ನು ಕುರಿತು ಪ್ರಾರ್ಥಿಸಿದೆ. "ಏನಪ್ಪಾ ಭಗವಂತ ನನ್ನ ಸ್ಥಿತಿ ಹೀಗಾಯಿತು", ಇವತ್ತಿನ ಪರಿಸ್ಥಿತಿಯನ್ನು ಸರಿದೂಗಿಸುವುದೆಂತು. "ಗಂಟಲು ಪೂರ್ಣವಾಗಿ ಕಟ್ಟಿದೆ, ಇದಕ್ಕೆ ಪರಿಹಾರ ಏನು" ಎಂಬುದಾಗಿ ಪೂಜೆ ಮುಗಿಸಿ ಹೊರಬಂದೆ. ಕಾರ್ಯಕ್ರಮದಂತೆ ಉತ್ಸವ ಮುಂತಾದ ಕಾರ್ಯಗಳಲ್ಲಿ ಪಾಲ್ಗೊಂಡೆ. ಆ ದೇವದೇವನ ಅನುಗ್ರಹದಿಂದ ಪ್ರಾರಂಭೋತ್ಸವ ಸಮೀಪಿಸುತ್ತಿದ್ದಂತೆ ಕ್ರಮಕ್ರಮವಾಗಿ ಗಂಟಲು ಕಟ್ಟಿದ್ದು ಸುಧಾರಿಸಿತು. ರಾಷ್ಟ್ರಪತಿಯವರು ಬರುವ ಸಮಯಕ್ಕೆ ಗಂಟಲು ಕಟ್ಟಿದ್ದು ಬಿಟ್ಟಿತು. ಸಮಾರಂಭದ ಮೂರು ದಿನಗಳೂ ನನಗೆ ಗಂಟಲಿನ ತೊಂದರೆಯಾಗಲಿಲ್ಲ. ಅದಕ್ಕಾಗಿ ವೈದ್ಯರ ಸಲಹೆ ಪಡೆಯಲಿಲ್ಲ, ಇಷ್ಟೆಲ್ಲಾ ಆದದ್ದು— "ಇಷ್ಟಲಿಂಗವನ್ನು ನಂಬಿ ನಿಷ್ಠೆಯಿಂದ ಪೂಜಿಸಿ ಪ್ರಾರ್ಥಿಸಿದ ಫಲ" ಜೀವನದಲ್ಲಿ ಭಗವಂತನ ಮೇಲೆ ಭಾರಹಾಕಿ ನಿಷ್ಠೆಯಿಂದ ಪ್ರಾರ್ಥನೆ ಸಲ್ಲಿಸಿದರೆ ನಮ್ಮ ಇಷ್ಟಾರ್ಥ ದೊರೆಯುವುದರಲ್ಲಿ ಸಂಶಯವಿಲ್ಲ. ನನ್ನ ಅನುಭವದಲ್ಲಿ ಇದು ಮೊದಲಲ್ಲ.

(ತುಮಕೂರು ತಾಲ್ಲೋಕು ಕಂಚೀನಹಳ್ಳಿಯಲ್ಲಿ ಬಸವ ಜಯಂತಿಯ ಉತ್ಸವ ಸಮಾರಂಭದಲ್ಲಿ ಶ್ರೀ ಶ್ರೀ ಸನ್ನಿಧಿಯವರು ಅಪ್ಪಣೆ ಕೊಡಿಸಿದ್ದು)



## ಶಾಸಕಿ ಶ್ರೀಮತಿ ಎಸ್. ಪ್ರಮಿಳಾರವರ ಭಾಷಣ

ರಾಷ್ಟ್ರ ಜೀವನದಲ್ಲಿ ಮಹಿಳೆ ಎಂಬ ವಿಚಾರದ ಬಗ್ಗೆ ಮಾತಾಡುವಂತೆ ಕಾರ್ಯ
ಕರ್ತರು ತಿಳಿಸಿದ್ದಾರೆ. ಮೊದಲು ಕರ್ನಾಟಕದ ಮಹಿಳೆ ಅನಂತರ ರಾಷ್ಟ್ರದ ಮಹಿಳೆ
ನಮ್ಮ ಕರ್ನಾಟಕ ಮಹಿಳೆ ಅದರಲ್ಲೂ ವೀರಶೈವ ಸಮಾಜದ ಮಹಿಳೆಯು ಅನುಭವಿ
ಸುತ್ತಿರುವ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸ್ವಾತಂತ್ರ್ಯ ಕಳೆದುಕೊಂಡಿರುವ
ಬಗ್ಗೆ ತಮ್ಮೆಲ್ಲರ ಗಮನವನ್ನು ಸೆಳೆದಿದ್ದೇನೆ. ಮಹಿಳೆ ಎಂದರೆ ಮಹಿಳೆಯ ಕುಟುಂಬ,
ಆಕೆಯ ಮಕ್ಕಳಿಗೆ ಇಂದು ಆಗುತ್ತಿರುವ ರಾಜಕೀಯ, ಸಾಮಾಜಿಕ ಕ್ಷೇತ್ರದ ಅನ್ಯಾ
ಯಗಳನ್ನು ಕುರಿತು ಚಿಂತಿಸುವುದು ಅಗತ್ಯ ಎಂದು ಭಾವಿಸಿದ್ದೇನೆ.
ಬಸವಣ್ಣನವರು 12 ನೆಯ ಶತಮಾನದಲ್ಲಿ ಹೆಣ್ಣು ಮಕ್ಕಳಿಗೆ ಎಲ್ಲ ವಿಧದ
ಸ್ವಾತಂತ್ರ್ಯವನ್ನು ಕೊಟ್ಟಿದಲ್ಲದೆ ಜಾತಿ ಭೇದಗಳ ತಾರತಮ್ಯವನ್ನು ಗಣನೆ ಮಾಡದೆ
'ಇವ ನಮ್ಮವ, ಇವ ನಮ್ಮವ' ಎನ್ನುವ ಆತ್ಮೀಯ ಭಾವನೆಯನ್ನು ಸಮಾಜದಲ್ಲಿ
ಬೀರಿದರು. ತಾವು ಸ್ಥಾಪಿಸಿದ ಅನುಭವ ಮಂಟಪದಲ್ಲಿ ಧಾರ್ಮಿಕವಾಗಿ ಚರ್ಚಿಸುವ,
ಅವಕಾಶವನ್ನು ಹೆಣ್ಣು ಮಕ್ಕಳಿಗೆ ಕಲ್ಪಿಸಿಕೊಟ್ಟರು. ಆ ಸ್ವಾತಂತ್ರ್ಯ ನಮ್ಮ ಇಂದಿನ
ಸಮಾಜದಲ್ಲಿ ನಮ್ಮ ಹೆಣ್ಣುಮಕ್ಕಳಿಗೆ ಬೇಕಾಗಿದೆ. ಸಮಾಜದಲ್ಲಿ ಮತ್ತು ಸರ್ಕಾರದಲ್ಲಿ
ತಮ್ಮ ಮಕ್ಕಳಿಗೆ ಕಳೆದ ಎಳೆಂಟು ವರ್ಷಗಳಿಂದ ಆಗುತ್ತಿರುವ ಅನ್ಯಾಯವನ್ನು ಪ್ರತಿ
ಭಟಿಸಿ ನಿಲ್ಲುವ ಅವಕಾಶ ಬೇಕಾಗಿದೆ. ಇಲ್ಲಿರುವ ಪ್ರತಿಯೊಬ್ಬ ಮಕ್ಕಳು ಈ ಬಗ್ಗೆ
ಎಚ್ಚೆತ್ತುಕೊಳ್ಳುವಂತೆ ತಮ್ಮ ಪುರುಷರಿಗೆ ತಿಳಿಸಬೇಕಾಗಿದೆ. ತಮ್ಮ ಮಕ್ಕಳ ವಿದ್ಯಾ
ಭ್ಯಾಸಕ್ಕೆ ಆಗುತ್ತಿರುವ ತೊಂದರೆಗೆ ಪ್ರತಿಭಟಿಸಿ ನಿಲ್ಲಬೇಕಾಗುತ್ತದೆ. ಸೂಕ್ತ ಸಂದರ್ಭ
ದಲ್ಲಿ ಮಹಿಳೆ ಪುರುಷರಿಗೆ ಉಚಿತ ಧೈರ್ಯ ಸಲಹೆ ಶಕ್ತಿ ಸಾಮರ್ಥ್ಯಗಳನ್ನು ತುಂಬ
ಬೇಕಾಗುತ್ತದೆ. ಬಸವಣ್ಣನವರಿಗೆ ಬಿಜ್ಜಳನಿಂದ ಮಂತ್ರಿ ಪದವಿಯ ಆಹ್ವಾನ ಬಂದಾಗ
ಅಕ್ಕ ನೀಲಾಂಬಿಕೆ ಕೊಟ್ಟ ಸಲಹೆ ನೆನಪಿಗೆ ಬರುತ್ತದೆ ಮಂತ್ರಿಪದವಿ ಸ್ವೀಕರಿಸಲೇ?
ಎಂದಾಗ, ನಾವಿಬ್ಬರೂ ಪತ್ನಿಯರೂ ನಿಮ್ಮ ಮಂತ್ರಿ ಪದವಿಗೆ ಚ್ಯುತಿ ಬರದಂತೆ ಸಲಹೆ
ಸಹಕಾರಗಳನ್ನು ಕೊಡುತ್ತೇವೆಂದ ಮಾತು ಇಂದು ಎಲ್ಲರಿಗೂ ಆದರ್ಶವಾಗಿದೆ. ಆದ್ದ
ರಿಂದ ಮಹಿಳೆಯು ಪುರುಷರ ಎಲ್ಲ ವಿಧ ಕಾರ್ಯಗಳಲ್ಲಿ ಭಾಗವಹಿಸಿ ಸೂಕ್ತ ಸಹಕಾರ
ಗಳನ್ನು ಕೊಡುವ ವಿಚಾರ ಸ್ವಾತಂತ್ರ್ಯ ಮಹಿಳೆಗಿದೆ ಎಂದು ನೀವೆಲ್ಲಾ ಅರ್ಥಮಾಡಿ
ಕೊಳ್ಳಬೇಕಾಗಿದೆ. ಅನುಭವ ಮಂಟಪಕ್ಕೆ ಆಗಮಿಸಿದ ಅಕ್ಕ ತನ್ನ ವೈಚಾರಿಕ ವಿಚಾರ
ಮಂಥನದಿಂದ ಎಲ್ಲ ಶರಣರ ಮನವನ್ನು ಗೆದ್ದಂತೆ ನಾವೆಲ್ಲರೂ ಇಂದು ನಮ್ಮ ವಿಚಾರ
ಸ್ವಾತಂತ್ರ್ಯದಿಂದ ಎಲ್ಲರ ಗಮನ ಸೆಳೆಯ ಬೇಕಾಗಿದೆ. ಹೆಣ್ಣು ಮಕ್ಕಳು ಧಾರ್ಮಿಕ
ಸ್ವಾತಂತ್ರ್ಯವನ್ನು ಇಂದು ಪಡೆಯಬೇಕಾಗಿದೆ. ಆ ಧಾರ್ಮಿಕ ಸ್ವಾತಂತ್ರ್ಯದ ವೈಚಾರಿ
ಕತೆಯಿಂದ ನಮ್ಮ ಮನೆ ಮಂದಿರವನ್ನು ಸುವ್ಯಸ್ಥಿತಗೊಳ್ಳುವಂತೆ ನೋಡಿಕೊಳ್ಳ
ಬೇಕಾಗಿದೆ. ಅಷ್ಟೇ ಅಲ್ಲ ನಾಡಿನ ಸದ್ಯದ ಪರಿಸ್ಥಿತಿಗಳನ್ನು ಕುರಿತು ವಿಚಾರ ಮಾಡುವ

ಸ್ವಾತಂತ್ರ್ಯವನ್ನು ಉಪಯೋಗಿಸಿಕೊಳ್ಳಬೇಕಾಗಿದೆ. ಹೆಣ್ಣು ಮಕ್ಕಳು ಸಮಾಜದ ಆಸೆ ಆಮಿಷಗಳಿಗೆ ಬಲಿಯಾಗದೆ ತಮ್ಮ ಕರ್ತವ್ಯದಲ್ಲಿ ನಿರತರಾಗಬೇಕು. ನಮ್ಮ ಘನತೆ ಗೌರವಗಳಿಗೆ ಕುಂದುಂಟಾಗದಂತೆ ಎಚ್ಚರಿಕೆವಹಿಸಬೇಕು. ಬಸವಣ್ಣನವರಿಗೆ ತಮ್ಮ ಘನತೆಗೆ ಕುಂದುಂಟಾದಾಗ ಮಂತ್ರಿ ಪದವಿಗೆ ಶರಣು ಹೊಡೆದಂತೆ ನಾನೂ ನನ್ನ ಶಾಸಕ ಪದವಿಗೆ ಶರಣು ಹೊಡೆದು ಬರುತ್ತೇನೆ. ಅಂತೆಯೇ ಎಲ್ಲರೂ ದೃಢನಿರ್ಧಾರವನ್ನು ಕೈಗೊಳ್ಳಬೇಕು. ಹೆಣ್ಣು ಮಕ್ಕಳು ತ್ಯಾಗಮಯಿ ಜೀವನವನ್ನು ಮೈಗೂಡಿಸಿಕೊಂಡು ಬಂದವರು. ಗಾಂಧೀಜಿ, ರಾಮಕೃಷ್ಣ ಪರಮಹಂಸರಂಥವರ ಜೀವನದಲ್ಲಿ ಹೆಣ್ಣು ತೋರಿದ ತ್ಯಾಗಮಯ ಜೀವನ ನಮ್ಮೆಲ್ಲರಿಗೂ ಆದರ್ಶವಾಗಿದೆ. ಕಸ್ತೂರಿಬಾ, ಶಾರದಾದೇವಿಯವರು ಗಾಂಧಿ ಮತ್ತು ಪರಮಹಂಸರ ಲೋಕ ವಿಖ್ಯಾತಿಗೆ ಕಾರಣರಾಗಿದ್ದಾರೆ. ಒಮ್ಮೆ ಪ್ರಸವವೇದನೆಯಿಂದ ವ್ಯಥೆ ಪಡುತ್ತಿದ್ದ ಹೆಣ್ಣು ಮಗಳ ತ್ಯಾಗಮಯ ಜೀವನ ಮತ್ತು ಆಕೆಯು ತನ್ನ ಪ್ರಾಣಕ್ಕಿಂತಲೂ ತನ್ನ ಪತಿಯ ವಂಶ ಬೆಳೆಯುವಂತೆ ಮಗುವನ್ನು ಉಳಿಸಿಕೊಡಲು ವೈದ್ಯರನ್ನು ಪ್ರಾರ್ಥಿಸಿದ ದೃಶ್ಯವನ್ನು ಕಂಡು ಗಾಂಧೀಜಿ, ನನಗೆ ಜನ್ಮವಿದ್ದರೆ, ಮುಂದಿನ ಜನ್ಮದಲ್ಲಿ ಹೆಣ್ಣಾಗಿ ಹುಟ್ಟಿಸು ಎಂದು ಭಗವಂತನನ್ನು ಪ್ರಾರ್ಥಿಸಿದರಂತೆ. ಇದರ ಅರ್ಥ ಹೆಣ್ಣಿನ ಜೀವನವನ್ನು ಪಡೆದಿದ್ದೇವೆ. ಆದ್ದರಿಂದ ಮಹಿಳಾ ಜನ್ಮ ಒಂದು ಪವಿತ್ರ ಕಾರ್ಯಕ್ಕೋಸ್ಕರವಾಗಿ. ಬಂದು ಮನೆಯನ್ನು ಬೆಳಗಿಸಿ ಸಾರ್ಥಕಗೊಳಿಸುವುದಕ್ಕಾಗಿ. ಈ ಕಾರ್ಯವನ್ನು ಮಾಡುವವರೇ ನಮ್ಮ ಮಕ್ಕಳು. ಅವರಿಗಾಗುವ ಅನ್ಯಾಯವೇ ನಮ್ಮ ಅನ್ಯಾಯ. ಅವರ ಸುಖವೇ ನಮ್ಮ ಸುಖ. ಅವರ ಏಳಿಗೆ ನಮ್ಮನ್ನು ಅವಲಂಬಿಸಿದೆಯೆಂದು ವಿಚಾರ ಮಾಡಿ ನಮ್ಮ ಧೈರ್ಯ ನಮ್ಮ ವೈಚಾರಿಕ ಸ್ವಾತಂತ್ರ್ಯ ಉಳಿಯುವಂತೆ ಹೋರಾಡಲು ನಮ್ಮ ಪುರುಷರನ್ನು ಹುರಿದುಂಬಿಸುವ ಕಾರ್ಯ ಎಲ್ಲಾ ಹೆಣ್ಣು ಮಕ್ಕಳ ಜವಾಬ್ದಾರಿಯಾಗಿದೆ.

ಅಕ್ಕಮಹಾದೇವಿ ಧಾರ್ಮಿಕ, ಸಾಮಾಜಿಕ ಮುಂತಾದ ಎಲ್ಲ ವಿಧವಾದ ವಿಚಾರ ಸ್ವಾತಂತ್ರ್ಯವನ್ನು ಬಸವಣ್ಣನೇ ಮೊದಲಾದ ಶಿವಶರಣರ ಮುಂದೆ ಮಂಡಿಸಿ, ಅವರ ಹೊಗಳಿಕೆಗೆ ಪಾತ್ರಳಾದಳು. ಅಂದಿನ ಸಮಾಜದ ಮಾನ್ಯತೆಯನ್ನು ಪಡೆದಳು. ಎಲ್ಲ ಕಾಲದ ಹೆಣ್ಣು ಮಕ್ಕಳಿಗೂ ಮಾರ್ಗದರ್ಶಕಳಾದಳು. ಅವಳ ಸರ್ವಾಂಗೀಣ ವಿಚಾರ ಸ್ವಾತಂತ್ರ್ಯಕ್ಕೆ ಕೇಂದ್ರ ಶಕ್ತಿಯಾಗಿ ಪ್ರೋತ್ಸಾಹ ಕೊಟ್ಟವರು ಬಸವಣ್ಣನವರು. ಅಂತೆಯೇ ಇಂದು ಅಭಿನವ ಬಸವಣ್ಣನವರಂತೆ ನಮ್ಮೆಲ್ಲರಿಗೂ ಸ್ಫೂರ್ತಿಯನ್ನು ನೀಡುತ್ತಿರುವ ಪರಮ ಪೂಜ್ಯ ಶ್ರೀ ಶ್ರೀಗಳವರು ಚೈತನ್ಯದಾಯಕ ಶಕ್ತಿಯಾಗಿದ್ದಾರೆ. ಅವರ ದಿವ್ಯ ಮಾರ್ಗದರ್ಶನ ನಮ್ಮೆಲ್ಲರಿಗೂ ಇಂದು ದೊರೆಯುತ್ತಿದೆ. ಈ ದಿವ್ಯ ಚೇತನದ ಪ್ರಭಾ ಬೆಳಗಿನಲ್ಲಿ ನಮ್ಮ ಬಾಳನ್ನು ಬೆಳಗಿಸಿ ಕೊಳ್ಳೋಣ. ನಮ್ಮ ಬಾಳು ಎಲ್ಲರಿಗೂ ಆದರ್ಶವಾಗುವಂತೆ ನೋಡಿಕೊಳ್ಳೋಣ. ಸನ್ಮಾರ್ಗಕಲ್ಲದೆ ಇಡೀ ರಾಷ್ಟ್ರಕ್ಕೆ ನಮ್ಮ ನಡೆ ನುಡಿ ತೋರುಗೆರೆಯ ಅವಕಾಶವಾಗಲೆಂದು ಹಾರೈಸುತ್ತಾ ಮಾಡುತ್ತಿದ್ದೇನೆ.

LICENCED TO POST WITHOUT PRE PAYMENT LICENCE NO. 3
SIDDAGANGA MONTHLY Reg. No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.